KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಡಿಸೆಂಬರ್ ೧೦, ೨೦೦೯ (ಮಾರ್ಗಶಿರ ೧೯, ಶಕ ವರ್ಷ ೧೯೩೧) | ಸಂಚಿಕೆ ೪೯ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ನಗರಾಭಿವೃದ್ಧಿ ಸಚಿವಾಲಯ

**ವಿಷಯ:–** ಮಂಗಳೂರು ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ–2021 (ಪರಿಷ್ಕೃತ–II)ಕ್ಕೆ ಸರ್ಕಾರದ ಅಂತಿಮ ಅನುಮೋದನೆ ನೀಡುವ ಬಗ್ಗೆ.

**ಉಲ್ಲೇಖ:–** 1) ಸರ್ಕಾರದ ಆದೇಶ ಸಂಖ್ಯೆ:ನಅಇ 61 ಬೆಂರೂಪ್ರಾ 2006, ದಿ:7–11–2006.

2) ಆಯುಕ್ತರು, ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂ:ಮನಪ್ರಾ:ನಯೋ:ಮ.ಯೋ: 2008–09, ದಿ:31–12–2008 ಹಾಗೂ ಮನಪ್ರಾ:ನಯೋಸ:ಅಂಮಯೋ:2008–09, ದಿ:21.1.2009.

3) ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ ಇವರ ಕಡತ ಸಂಖ್ಯೆ:ನಯೋ(17): ಮಂಗಳೂರು:ಮ.ಯೋ.ಪ–II (ಅಂತಿಮ):2009,ದಿ:4–3–2009 ಹಾಗೂ ಪತ್ರ ಸಂಖ್ಯೆ:ಟಿಪಿ (17)/ ಮಂಗಳೂರು ಝೆಡ್ಆರ್/ಮಾಡಿಫಿಕೇಷನ್/2009, ದಿ:9–7–2009.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1)ರ ಸರ್ಕಾರಿ ಆದೇಶದಲ್ಲಿ ಮಂಗಳೂರು ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ–2021 (ಪರಿಷ್ಕೃತ–II)ಕ್ಕೆ ತಾತ್ಕಾಲಿಕ ಅನುಮೋದನೆಯನ್ನು ನೀಡಿ ಆದೇಶಿಸಿದೆ.

ಮೇಲೆ ಓದಲಾದ ಉಲ್ಲೇಖ (2)ರ ಪತ್ರಗಳಲ್ಲಿ ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರವು ಮಂಗಳೂರು ಸ್ಥಳೀಯ ಯೋಜನಾ ಪ್ರದೇಶಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1) ಮತ್ತು 13(2) ರನ್ವಯ ಅಗತ್ಯ ಕ್ರಮ ಜರುಗಿಸಿ, ಮಹಾ ಯೋಜನೆ–2021 (ಪರಿಷ್ಕೃತ–II)ರ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ಅಂತಿಮ ಅನುಮೋದನೆಗೆ ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ ಇವರ ಮುಖಾಂತರ ಸಲ್ಲಿಸಿರುತ್ತದೆ.

ಮಂಗಳೂರು ಸ್ಥಳೀಯ ಯೋಜನಾ ಪ್ರದೇಶದ ಜನಸಂಖ್ಯೆಯು 2001ರ ಜನಗಣತಿಯಂತೆ 6,46,434 ಇದ್ದು 20 ವರ್ಷಗಳ ಯೋಜನಾ ಅವಧಿಗೆ ಅಂದರೆ, 2021ರ ವೇಳೆಗೆ ಜನಸಂಖ್ಯೆಯು 10,70,000 ಆಗಬಹುದೆಂದು ಅಂದಾಜಿಸಿ ಮಹಾ ಯೋಜನೆಯನ್ನು ತಯಾರಿಸಲಾಗಿದೆ. ಮಂಗಳೂರು ಸ್ಥಳೀಯ ಯೋಜನಾ ಪ್ರದೇಶದ ಜನಸಂಖ್ಯೆಯ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹವಾಗುಣ, ರಸ್ತೆಗಳ ಹಾಲಿ ಪರಿಚಲನಾ ವ್ಯವಸ್ಥೆಯ ಸಮಸ್ಯೆಗಳನ್ನು ವಿಶ್ಲೇಷಿಸಿ ಯೋಜನಾ ತತ್ವಗಳ ಅಧಾರದ ಮೇಲೆ ಹಾಗೂ ಮಹಾ ಯೋಜನೆಯ ತಯಾರಿಕೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 12ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ, ನಗರದ ಇಂದಿನ ಬೆಳವಣಿಗೆಗೆ ವಿವಿಧ ಉಪಯೋಗಗಳಿಗೆ ಬೇಕಾಗಬಹುದಾದ ಭೂಮಿಯನ್ನು ಈ ಕೆಳಗಿನಂತೆ ಕಾಯ್ದಿರಿಸಿ, ಮಹಾ ಯೋಜನೆಯನ್ನು ರೂಪಿಸಲಾಗಿದೆ ಹಾಗೂ ಮಹಾ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಯನ್ನು ರಚಿಸಲಾಗಿದೆ.

ಮಂಗಳೂರು ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 30,600 ಹೆಕ್ಟೇರ್ ವಿಸ್ತೀರ್ಣದಲ್ಲಿ ನಗರದ ಯೋಜಿತ ಬೆಳವಣಿಗೆಗಾಗಿ ಒಟ್ಟು 24,255.73 ಹೆಕ್ಟೇರ್ ಪ್ರದೇಶವನ್ನು ನಗರೀಕರಣ ಎಲ್ಲೆ ಎಂದು ಪ್ರಸ್ತಾಪಿಸಲಾಗಿದೆ. ಈ ಪೈಕಿ ವಸತಿಗಾಗಿ 11317.59 ಹೆಕ್ಟೇರ್ (ಶೇ.46.66) ವಾಣಿಜ್ಯಕ್ಕೆ 892.97 ಹೆಕ್ಟೇರ್ (ಶೇ.3.68), ಕೈಗಾರಿಕೆಗಾಗಿ 2790.71 ಹೆಕ್ಟೇರ್ (ಶೇ.11.51), ಸಾರ್ವಜನಿಕ : ಅರೆ ಸಾರ್ವಜನಿಕಕ್ಕೆ 1047.64 ಹೆಕ್ಟೇರ್ (ಶೇ.4.32), ಉದ್ಯಾನವನ : ಬಯಲು ಜಾಗಕ್ಕೆ 2005.74 ಹೆಕ್ಟೇರ್ (ಶೇ.8.27), ಸಾರಿಗೆ ಮತ್ತು ಸಂಪರ್ಕಕ್ಕೆ 2629.48 ಹೆಕ್ಟೇರ್ (ಶೇ.10.84), ಮತ್ತು ಸಾರ್ವಜನಿಕ ಉಪಯುಕ್ತತೆಗೆ 45.80ಹೆಕ್ಟೇರ್ (ಶೇ.0.19) ವಿಸ್ತೀರ್ಣವನ್ನು ನಿಗದಿಪಡಿಸಲಾಗಿದೆ.

ಸದರಿ ಮಹಾ ಯೋಜನೆ–2021 (ಪರಿಷ್ಕೃತ–II)ಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 13(3) ರನ್ವಯ ಅಂತಿಮ ಅನುಮೋದನೆ ನೀಡಲು, ಮೇಲೆ ಓದಲಾದ (3)ರ ಕಡತದಲ್ಲಿ ಹಾಗೂ ಪತ್ರದಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಶೀಲಿಸಿ ಸ್ಥಳೀಯ ಭೌಗೋಳಿಕ ಪರಿಸ್ಥಿತಿಗನುಸಾರವಾಗಿ ವಲಯ ನಿಯಮಾವಳಿಗಳಲ್ಲಿ ಕೆಲವು ತಿದ್ದುಪಡಿಗಳಿಗೆ ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಲಯ ನಿಯಮಾವಳಿಗಳಲ್ಲಿನ ಕೆಲವು ಅಂಶಗಳಿಗೆ ಸಂಬಂಧಪಟ್ಟಂತೆ ದಿ:1–6–2009 ಹಾಗೂ ದಿ:26–8–2009 ರಂದು ಮಾನ್ಯ ನಗರಾಭಿವೃದ್ಧಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಗಳಲ್ಲಿ ಚರ್ಚಿಸಿ ಯೋಜನಾ ದೃಷ್ಟಿಯಿಂದ ಹಾಗೂ ಮಂಗಳೂರು ನಗರದ ಸ್ಥಳೀಯ ಭೌಗೋಳಿಕ ಲಕ್ಷಣಗಳಿಗೆ ಅನುಗುಣವಾಗಿ ಕೆಲವು ಮಾರ್ಪಾಡುಗಳನ್ನು ಮಾಡಲು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 186 ಮೈಅಪ್ರಾ 2009, ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಂಗಳೂರು ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ–2021(ಪರಿಷ್ಕೃತ–II)ಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ1961ರ ಕಲಂ 13(3) ರನ್ವಯ ಈ ಕೆಳಕಂಡ ನಿಬಂಧನೆಗಳಿಗೊಳಪಡಿಸಿ ಅಂತಿಮ ಅನುಮೋದನೆಯನ್ನು ನೀಡಲಾಗಿದೆ. ಮಹಾಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

1) 18.0 ಮೀ.ಗಿಂತಲೂ ಮೇಲ್ಪಟ್ಟ ಎತ್ತರದ ಕಟ್ಟಡಗಳನ್ನು High-rise ಕಟ್ಟಡಗಳು ಎಂದು ಪರಿಗಣಿಸತಕ್ಕದ್ದು.
2) High-rise ಕಟ್ಟಡಗಳಿಗೆ ಅನುಮೋದನೆ ನೀಡುವಾಗ ಹಾಲಿ ರಸ್ತೆ ಅಗಲವು ಕನಿಷ್ಠ 9.0 ಮೀ. ಇರತಕ್ಕದ್ದು. ಹಾಗೂ ಸದರಿ ರಸ್ತೆಯ ಅಗಲವನ್ನು 12.0 ಮೀ. ಅಥವಾ ಅದಕ್ಕಿಂತ ಹೆಚ್ಚಿನ ಅಗಲಕ್ಕೆ ವಿಸ್ತರಿಸಲು ಮಹಾ ಯೋಜನೆಯಲ್ಲಿ ಪ್ರಸ್ತಾಪಿಸಿರತಕ್ಕದ್ದು. ಈ ಎರಡೂ ಷರತ್ತುಗಳನ್ನು ಪೂರೈಸುವ ಪ್ರಕರಣಗಳಲ್ಲಿ ಮಾತ್ರ High-rise ಕಟ್ಟಡಗಳನ್ನು ಅನುಮೋದಿಸತಕ್ಕದ್ದು.
3) Premium FAR ಸೇರಿದಂತೆ ಗರಿಷ್ಠ 3.25 ಅನುಪಾತವನ್ನು (FAR) ನಿಗದಿಪಡಿಸತಕ್ಕದ್ದು. ಹಾಗೂ ಅದರಂತೆ ವಲಯ ನಿಯಮಾವಳಿಗಳ ಸಂಬಂಧಿತ Table ಗಳನ್ನು ಸೂಕ್ತವಾಗಿ ಪರಿಷ್ಕರಿಸಿಕೊಳ್ಳತಕ್ಕದ್ದು.
4) High-rise ಕಟ್ಟಡಗಳಿಗೆ ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರವು ಪ್ರಸ್ತಾಪಿಸಿರುವ ಮುಂದಿನ ನಡು ಜಾಗ (Front set back) ಕನಿಷ್ಠ 6.0 ಮೀ. ಬದಲು ಕನಿಷ್ಠ 5.0 ಮೀ.ಗೆ ಪರಿಗಣಿಸುವುದು. ಇತರ ಮೂರು ಕಡೆಗಳಲ್ಲಿ ಕನಿಷ್ಠ 6.0 ಮೀ. ಅಗಲ ಅಳವಡಿಕೊಳ್ಳತಕ್ಕದ್ದು.
5) ಕಾರ್ ಪಾರ್ಕಿಂಗ್ ಯುನಿಟ್‌ನ ಅಳತೆ 2.50 ಮೀ. x 5.0 ಮೀ. ಇರತಕ್ಕದ್ದು.
6) High-rise ಕಟ್ಟಡಗಳಿಗೆ ನಿರಾಕ್ಷೇಪಣಾ ಪತ್ರ ನೀಡುವ ಸಮಯದಲ್ಲಿ ಅಗ್ನಿಶಾಮಕ ಇಲಾಖೆಯವರು ಕಟ್ಟಡದ ಎತ್ತರ, ನಡುಜಾಗ, ರಸ್ತೆ ಅಗಲ ಮುಂತಾದವುಗಳ ಬಗ್ಗೆ ವಲಯ ನಿಯಮಾವಳಿಗಳಲ್ಲಿನ ಅಂಶಗಳನ್ನು ಪರಿಗಣಿಸತಕ್ಕದ್ದು. ಮತ್ತು ಅಗ್ನಿಶಮನ ಸುರಕ್ಷತಾ ಕ್ರಮಗಳ ಬಗ್ಗೆ National Building Code (NBC) ಅನ್ನು ಪಾಲಿಸತಕ್ಕದ್ದು.
7) ಪ್ರಸ್ತಾವಿತ ಭೂ ಉಪಯೋಗ ನಕ್ಷೆಗಳಲ್ಲಿ ಮಂಗಳೂರು ತಾಲ್ಲೂಕು, ಕುಂಜತ್ತಬೈಲು ಗ್ರಾಮದ ಸ.ನಂ.9 ರಿಂದ 15, 16, 20 ರಿಂದ 25, 26 ರಿಂದ 33, 35, 36, 41 ರಿಂದ 44, 62, 63; ಪಂಜಿಮೊಗರು ಗ್ರಾಮದ ಸ.ನಂ.12 ರಿಂದ 15, 16, 18, 36, 41, 42 ರಿಂದ 48 ಮತ್ತು ತಲಪಾಡಿ ಗ್ರಾಮದ ಸ.ನಂ. 96, 97, 98ರ ಜಮೀನುಗಳನ್ನು ವಸತಿ ವಲಯಕ್ಕೆ ಕಾಯ್ದಿರಿಸತಕ್ಕದ್ದು.
8) ಮೇಲಿನ 1 ರಿಂದ 7 ರವರೆಗಿನ ಬದಲಾವಣೆಗಳೊಂದಿಗೆ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು ಪರಿಷ್ಕರಿಸಿ ಸಲ್ಲಿಸಿರುವ ವಲಯ ನಿಯಮಾವಳಿಗಳನ್ನು ಸರ್ಕಾರವು ಅಂಗೀಕರಿಸಿರುತ್ತದೆ. ಅದರಂತೆ ವಲಯ ನಿಯಮಾವಳಿಗಳನ್ನು ಸೂಕ್ತವಾಗಿ ಅಳವಡಿಸಿಕೊಂಡು ಯಥಾವತ್ತಾಗಿ ಅನುಷ್ಠಾನಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2200

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ಆರೋಗ್ಯ ನಿರ್ವಹಣಾ ಮಾಹಿತಿ ವ್ಯವಸ್ಥೆಯಡಿ ರಚನಾ ಕಾರ್ಯವನ್ನು ಅಳವಡಿಸಲು ಹಿರಿಯ ಮತ್ತು ಕಿರಿಯ ಮಾಹಿತಿ ತಂತ್ರಜ್ಞಾನ ಸಲಹೆಗಾರರನ್ನು ಗುತ್ತಿಗೆ ಆಧಾರದಲ್ಲಿ ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂ: ಹೆಚ್‌ಎಫ್‌ಡಬ್ಲ್ಯೂ (ಪಿಆರ್) 64 ಡಬ್ಲ್ಯೂ ಬಿಎ 2005, ದಿ:12.09.2005.

2. ಶ್ರೀ ಪಾಲೊ ಬೆಲ್ಲಿ, ಯೋಜನೆಯ ಕಾರ್ಯತಂಡ ನಾಯಕರು, ವಿಶ್ವಬ್ಯಾಂಕ್ ಅವರ ಇ–ಮೇಲ್ ಸಂದೇಶ ದಿನಾಂಕ: 10.02.2009 ಮತ್ತು 07.06.2009.

3. ಯೋಜನೆಯ ಕಾರ್ಯಕ್ರಮ ಚಾಲನಾ ಸಮಿತಿಯ 16ನೇ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದನ್ವಯ ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ವತಿಯಿಂದ ಆರೋಗ್ಯ ಮಾಹಿತಿ ವ್ಯವಸ್ಥೆಯನ್ನು ಮತ್ತಷ್ಟು ಸುಧಾರಿಸುವ ನಿಟ್ಟಿನಲ್ಲಿ ರಚನಾ ಕಾರ್ಯವನ್ನು ಅಳವಡಿಸಲು, ಡಾಟಾ ಎಂಟ್ರಿಯಲ್ಲಿ ನಕಲನ್ನು ಕಡಿಮೆ ಮಾಡುವ ಮತ್ತು ಡಾಟಾ ಗುಣಮಟ್ಟವನ್ನು ಅಭಿವೃದ್ಧಿ ಪಡಿಸುವ, ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಸಮುದಾಯ ಆರೋಗ್ಯ ಕೇಂದ್ರ ವರದಿಯ ಒತ್ತಡವನ್ನು ಕಡಿಮೆ ಮಾಡುವ ಬಗ್ಗೆ ವಿಶ್ವಬ್ಯಾಂಕ್ ಮಿಶನ್ ಅಂದಾಜಿಸಿರುವ ಕಾರ್ಯವನ್ನು, ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣ ಯೋಜನೆಯು ಒಪ್ಪಿದ್ದು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯದ, ಗಣಕ ಕೇಂದ್ರವನ್ನು ರಾಜ್ಯ ಆರೋಗ್ಯ ಮಾಹಿತಿ ಕೇಂದ್ರವನ್ನಾಗಿ ಪುನರ್ ರಚಿಸಿ, ಈ ಸಂಬಂಧ 1 ಹಿರಿಯ ಪ್ರೋಗ್ರಾಮರ್ ಮತ್ತು 4 ಜೂನಿಯರ್ ಪ್ರೋಗ್ರಾಮರ್ ಹುದ್ದೆಗಳನ್ನು ಮುದುವರೆಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಇ–ಮೇಲ್ ಸಂದೇಶಗಳಲ್ಲಿ ಮೇಲೆ ಸೂಚಿಸಿರುವ ಸದರಿ ಹುದ್ದೆಗಳನ್ನು ಗುತ್ತಿಗೆ ಆಧಾರದಲ್ಲಿ ಆಯ್ಕೆ ಮಾಡಿ ನೇಮಿಸಲು ವಿಶ್ವಬ್ಯಾಂಕ್ ಒಪ್ಪಿಗೆ ನೀಡಲಾಗಿತ್ತು. ಅದರಂತೆ, ದಿನಾಂಕ: 18.02.2009 ಪ್ರಕಟಣೆಯನ್ನು ಆಂಗ್ಲ ಮತ್ತು ಕನ್ನಡ ದಿನಪತ್ರಿಕೆಗಳಲ್ಲಿ ಹಿರಿಯ ಮತ್ತು ಕಿರಿಯ ಮಾಹಿತಿ ತಂತ್ರಜ್ಞಾನ ಸಲಹೆಗಾರರ ಆಯ್ಕೆಗೆ ಪ್ರಕಟಣೆಯನ್ನು ನೀಡಲಾಗಿತ್ತು. ಸದರಿ ಪ್ರಕಟಣೆ ಮೇರೆಗೆ 45 ಪ್ರಸ್ತಾವನೆಗಳು ಸ್ವೀಕೃತವಾಗಿದ್ದು ಮೌಲ್ಯಮಾಪನ ಸಮಿತಿಯು ಪ್ರಸ್ತಾವನೆಗಳನ್ನು ಪರಿಶೀಲಿಸಿ ಲಿಖಿತ ಪರೀಕ್ಷೆ ಮತ್ತು ಸಂದರ್ಶನಗಳನ್ನು ನಡೆಸಿ ಮೇಲಿನ ಐದು ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಶಿಫಾರಸ್ಸು ಮಾಡಿತ್ತು.

ದಿನಾಂಕ: 02.09.2009 ರಂದು ನಡೆದ ಯೋಜನೆಯ ಕಾರ್ಯಕ್ರಮ ಚಾಲನಾ ಸಮಿತಿಯ 16ನೇ ಸಭೆಯಲ್ಲಿ ಮೇಲ್ಕಂಡ ವಿಷಯವನ್ನು ಪ್ರಸ್ತಾಪಿಸಲಾಗಿದ್ದು,. ಸಮಿತಿಯು (3)ರಲ್ಲಿ ಓದಲಾದ ನಡವಳಿಗಳಲ್ಲಿ ಆಯ್ಕೆಯಾದ ಅಭ್ಯರ್ಥಿಗಳನ್ನು ಗುತ್ತಿಗೆ ಆಧಾರದ ಮೇಲೆ ಪಡೆಯಲು ಅನುಮೋದನೆಯನ್ನು ನೀಡಿರುತ್ತದೆ.

ಈ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯೂ (ಪಿಆರ್) 65 ಡಬ್ಲ್ಯೂಬಿಎ 2009, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2009**

ಮೇಲೆ ವಿವರಿಸಿರುವ ಪ್ರಸ್ತಾವನೆಗಳ ಹಿನ್ನೆಲೆಯಲ್ಲಿ ಸರ್ಕಾರವು, ಆರೋಗ್ಯ ನಿರ್ವಹಣಾ ಮಾಹಿತಿ ವ್ಯವಸ್ಥೆಯಡಿ 1 ಹಿರಿಯ ಪ್ರೋಗ್ರಾಮರ್ ಮತ್ತು 4 ಕಿರಿಯ ಪ್ರೋಗ್ರಾಮರ್ ಹುದ್ದೆಗಳ ಎದುರು ಈ ಕೆಳಕಂಡಂತೆ ಮಾಹಿತಿ ತಂತ್ರಜ್ಞಾನ ಸಲಹೆಗಾರರನ್ನು ಗುತ್ತಿಗೆ ಆಧಾರದ ಮೇಲೆ ಸಂಭಾವನೆಯನ್ನು ನಿಗಧಿಪಡಿಸಿ, 1 ವರ್ಷದ ಅವಧಿಗೆ ನೇಮಕಾತಿ ಮಾಡಲು ಮಂಜೂರಾತಿ ನೀಡಿದೆ. ಸೇವಾ ತೃಪ್ತಿ ದೃಢೀಕರಣದ ಮೇರೆಗೆ ಸೇವಾವಧಿಯನ್ನು ಮುಂದುವರಿಸಲಾಗುವುದು.

| ಕ್ರ. ಸಂ. | ಹೆಸರು | ಹುದ್ದೆ | ಮಾಸಿಕ ಸಂಭಾವನೆ |
|---|---|---|---|
| 1 | ಶ್ರೀ ರಾಜಾ ಅನ್ವರ್ ಹುಸೇನ್ | ಹಿರಿಯ ಮಾಹಿತಿ ತಂತ್ರಜ್ಞಾನ ಸಲಹೆಗಾರರು | 20,000–00 |
| 2 | ಶ್ರೀಮತಿ ಎಂ. ವಿ. ಉಷಾ | ಹಿರಿಯ ಮಾಹಿತಿ ತಂತ್ರಜ್ಞಾನ ಸಲಹೆಗಾರರು | 15,000–00 |
| 3 | ಶ್ರೀ ಬಿ. ಟಿ. ರಘುನಂದನ್ | ಹಿರಿಯ ಮಾಹಿತಿ ತಂತ್ರಜ್ಞಾನ ಸಲಹೆಗಾರರು | 15,000–00 |
| 4 | ಶ್ರೀಮತಿ ಎನ್. ಕಲಾವತಿ | ಹಿರಿಯ ಮಾಹಿತಿ ತಂತ್ರಜ್ಞಾನ ಸಲಹೆಗಾರರು | 15,000–00 |
| 5 | ಶ್ರೀ ಆರ್. ಶಿವಪ್ರಸಾದ್ | ಹಿರಿಯ ಮಾಹಿತಿ ತಂತ್ರಜ್ಞಾನ ಸಲಹೆಗಾರರು | 15,000–00 |

ಮೇಲ್ಕಂಡ ಅಭ್ಯರ್ಥಿಗಳು ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯೊಂದಿಗೆ ಗುತ್ತಿಗೆಯ ಷರತ್ತು ಮತ್ತು ನಿಬಂಧನೆಗಳನ್ನೊಳಗೊಂಡ ಕರಾರು ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು.

ಈ ಮೇಲಿನ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2210–06–800–0–84(ಪಿ) ಯೋಜನಾ ನಿರ್ವಹಣೆ ಮತ್ತು ಮೌಲ್ಯಮಾಪನದಡಿಯಲ್ಲಿ, 2009–10ನೇ ಸಾಲಿನಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಶಶಿಧರ್**

ಸರ್ಕಾರದ ಉಪ ಕಾರ್ಯದರ್ಶಿ, ಕೆಹೆಚ್‌ಎಸ್‌ಡಿಆರ್‌ಪಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

ಪಿ.ಆರ್. 2371

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಜಿ.ಎಂ. ಯಾತನೂರ್, ಎಸ್.ಪಿ. (ನಾನ್ ಐಪಿಎಸ್) ರವರು ವರ್ಗಾವಣೆ ಆದೇಶದ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಸಲ್ಲಿಸಿದ ಮನವಿ ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಅನ್ವಯ ಆದೇಶ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ:ಒಇ 71 ಪೊಸಿಪ 2009 ದಿನಾಂಕ 18.08.2009 ಮತ್ತು 22.08.2009.

2) ದಿನಾಂಕ 21–08–2009 ರಲ್ಲಿ ಕೆ.ಎ.ಟಿ. ಅರ್ಜಿ ಸಂಖ್ಯೆ: 3656/2009ರಲ್ಲಿ ನೀಡಿರುವ ತೀರ್ಪು.

3) ಶ್ರೀ ಜಿ.ಎಂ. ಯಾತನೂರ್, ಎಸ್.ಪಿ. ರವರ ಮನವಿ ದಿ: 31–08–2009

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 271 ಪೊಸಿಪ 2009 ದಿನಾಂಕ: 18–08–2009 ರಲ್ಲಿ ಶ್ರೀ ಎ.ಆರ್. ಅಣ್ವೇಕರ್, ಎಸ್.ಪಿ. (ನಾನ್ ಐಪಿಎಸ್) ಇವರನ್ನು ಅಡಿಷನಲ್ ಎಸ್.ಪಿ. ಬೀದರ್ ಇಲ್ಲಿ ಶ್ರೀ ಜಿ.ಎಂ.ಯಾತನೂರ್ ರವರ ಸ್ಥಾನದಲ್ಲಿ ವರ್ಗಾಯಿಸಲಾಗಿದ್ದು, ಶ್ರೀ ಜಿ.ಎಂ. ಯಾತನೂರ್ ರವರನ್ನು ಅಧಿಸೂಚನೆ ಸಂಖ್ಯೆ: ಒಇ 271 ಪೊಸಿಪ 2009 ದಿನಾಂಕ: 22–08–2009 ರಲ್ಲಿ ಎಸ್.ಪಿ. ರಾಜ್ಯ ಗುಪ್ತವಾರ್ತೆ, ಗುಲ್ಬರ್ಗಾ ಇಲ್ಲಿನ ಖಾಲಿ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಲಾಗಿದೆ. ಸದರಿ ವರ್ಗಾವಣೆಯ ವಿರುದ್ಧ ಶ್ರೀ ಜಿ.ಎಂ. ಯಾತನೂರ್ ರವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 3656/2009 ಸಲ್ಲಿಸಿರುತ್ತಾರೆ. ಸದರಿ ಅರ್ಜಿಯ ಮೇಲೆ ದಿನಾಂಕ: 21–08–2009 ರಂದು ಕೆ.ಎ.ಟಿ.ಯು ಕೆಳಕಂಡಂತೆ ತೀರ್ಪು ನೀಡಿದೆ.

I. The application is disposed of :

II. The first Respondent – Cadre Management Authority is directed to consider the Review application dated 18-08-2009 (Annexure-A4) Filed by the applicant and pass appropriate orders in accordance with law within two weeks from the date a certified copy f this order received, after notice to the 3rd respondent;

III. Till the final order is passed, the parties are directed to maintain status – quo as on today.

Sd/- Sd/-
Chairman Member

ಶ್ರೀ ಜಿ.ಎಂ. ಯಾತನೂರ್ ರವರು ದಿನಾಂಕ: 13–04–2007 ರಿಂದ ಅಡಿಷನಲ್ ಎಸ್.ಪಿ. ಬೀದರ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, 2 ವರ್ಷಗಳ ಅವಧಿಯನ್ನು ಪೂರೈಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಇವರು ತಮ್ಮ ವರ್ಗಾವಣೆಯ ವಿರುದ್ಧ ಅರ್ಜಿ ಸಲ್ಲಿಸಿ ಮುಂದುವರೆಸಲು ಕೋರಿರುವುದನ್ನು ಪರಿಗಣಿಸಿದ ವೃಂದ ನಿರ್ವಹಣಾ ಪ್ರಾಧಿಕಾರವರು ಇವರು ಈಗಾಗಲೇ ಪ್ರಸ್ತುತ ಹುದ್ದೆಯಲ್ಲಿ 2 ವರ್ಷಗಳನ್ನು ಪೂರೈಸಿರುವುದನ್ನು ಹಾಗೂ ಇವರ ಕಾರ್ಯ ನಿರ್ವಹಣೆ ಬಗ್ಗೆ ಡಿಜಿ ಮತ್ತು ಐಜಿಪಿ ರವರು ವ್ಯಕ್ತಪಡಿಸಿದ ಅಭಿಪ್ರಾಯವನ್ನು ವೃಂದ ನಿರ್ವಹಣಾ ಪ್ರಾಧಿಕಾರವು ಪರಿಗಣಿಸಿತು.

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಾಗೂ ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 494 ಪೊಸಿಪ 2009, ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2009**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನಂತೆ ಸರ್ಕಾರವು ಪರಿಶೀಲಿಸಿ, ದಿನಾಂಕ: 18.08.2009 ಮತ್ತು 22.08.2009ರ ಅಧಿಸೂಚನೆ ಸಂಖ್ಯೆ: ಒಇ 271 ಪೊಸಿಪ 2009 ರಲ್ಲಿ ಆದೇಶಿಸಿರುವ ವರ್ಗಾವಣೆಗಳನ್ನು ಸ್ಥಿರೀಕರಿಸಿ ಈ ಕೆಳಕಂಡಂತೆ ಸ್ಥಿರೀಕರಿಸಿ ಆದೇಶಿಸಿದೆ.

| ಕ್ರ. ಸಂ. | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಹುದ್ದೆ | ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸು |
|---|---|---|
| 1 | ಶ್ರೀ ಜಿ.ಎಂ. ಯಾತನೂರ್ ಅಡಿಷನಲ್ ಎಸ್.ಪಿ. ಬೀದರ್ | ಎಸ್.ಪಿ. ರಾಜ್ಯ ಗುಪ್ತವಾರ್ತೆ, ಗುಲ್ಬರ್ಗಾ – ಖಾಲಿ ಹುದ್ದೆ |
| 2 | ಶ್ರೀ ಎ.ಆರ್. ಅಣ್ವೇಕರ್ ಎಸ್.ಪಿ. ಹಾಗೂ ಪ್ರಾಂಶುಪಾಲರು ಪಿ.ಟಿ.ಎಸ್. ಖಾನಾಪುರ | ಅಡಿಷನಲ್ ಎಸ್.ಪಿ. ಬೀದರ್ – ಶ್ರೀ ಜಿ.ಎಂ. ಯಾತನೂರ್ ಇವರ ಸ್ಥಾನದಲ್ಲಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2372

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ. ಪ್ರಭಾಕರ್, ಎಸ್.ಪಿ. ಆಂತರಿಕ ಭದ್ರತಾ ವಿಭಾಗ ರವರು ವರ್ಗಾವಣೆ ಆದೇಶದ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಸಲ್ಲಿಸಿದ ಮನವಿ ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಅನ್ವಯ ಆದೇಶ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 271 ಪೊಸಿಪ 2009 ದಿನಾಂಕ 22–08–2009
2) ದಿನಾಂಕ 26–08–2009 ರಲ್ಲಿ ಕೆ.ಎ.ಟಿ.ಅರ್ಜಿ ಸಂಖ್ಯೆ :3725/2009ರಲ್ಲಿ ನೀಡಿರುವ ತೀರ್ಪು.
3) ಶ್ರೀ ಎಂ. ಪ್ರಭಾಕರ್ ಎಸ್.ಪಿ. ರವರ ಮನವಿ ದಿ : 25–08–2009

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 71 ಪೊಸಿಪ 2009 ದಿನಾಂಕ 22–08–2009 ರಲ್ಲಿ ಶ್ರೀ ಎಂ. ಪ್ರಭಾಕರ್, ಎಸ್.ಪಿ. (ನಾನ್ ಐಪಿಎಸ್) ಇವರನ್ನು ಡಿ.ಸಿ.ಪಿ. ವಿ.ವಿ.ಐ.ಪಿ. ಭದ್ರತೆ, ಬೆಂಗಳೂರು ಇಲ್ಲಿಗೆ ವರ್ಗಾಯಿಸಲಾಗಿದ್ದು, ಸದರಿ ವರ್ಗಾವಣೆಯ ವಿರುದ್ಧ ಶ್ರೀ ಎಂ. ಪ್ರಭಾಕರ್ ರವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 3725/2009 ಸಲ್ಲಿಸಿರುತ್ತಾರೆ. ಸದರಿ ಅರ್ಜಿಯ ಮೇಲೆ ದಿನಾಂಕ 26–08–009 ರಂದು ಕೆ.ಎ.ಟಿ. ಯು ಕೆಳಕಂಡಂತೆ ತೀರ್ಪು ನೀಡಿದೆ.

I. The application is disposed of :

II. The first Respondent – Cadre Management Authority is directed to consider the Review-application dated 25-08-2009 (annexure – A4) Filed by the applicant and pass appropriate orders in accordance with law within two weeks from the date a certified copy to this order received, after notice to the 4th Respondent;

III. Till the final order is passed, the parties are directed to maintain status – quo as on today.

Sd/- Sd/-
Chairman Member

ಶ್ರೀ ಎಂ. ಪ್ರಭಾಕರ್ ರವರು ದಿನಾಂಕ 25–08–2009ರ ಮೇಲ್ಮನವಿಯಲ್ಲಿ ತಾವು ಆಂತರಿಕ ಭದ್ರತಾ ವಿಭಾಗದಲ್ಲಿ ದಿನಾಂಕ 06–04–2009 ರಿಂದ ಕಾರ್ಯನಿರ್ವಹಿಸುತ್ತಿದ್ದು, ಉತ್ತಮ ಅಧಿಕಾರಿಗಳನ್ನು ತಮ್ಮ ಧೈರ್ಯ, ಸಾಹಸ ಮತ್ತು ಅಸಾಧಾರಣ ಕಾರ್ಯ ನಿರ್ವಹಣೆಗೆ ಪರಿಗಣಿಸಿ ನೇಮಿಸಲಾಗಿದೆ. ತಾವು ಮುಖ್ಯಮಂತ್ರಿಗಳ ಹಾಗೂ ರಾಷ್ಟ್ರಪತಿಗಳ ಪದಕಗಳನ್ನು ಪಡೆದಿದ್ದು, ತಮ್ಮನ್ನು ಆಂತರಿಕ ಭದ್ರತಾ ವಿಭಾಗದಲ್ಲಿಯೇ ಮುಂದುವರೆಸಲು ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಾಗೂ ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 494 ಪೊಸಿಪ 2009, ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2009**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನಂತೆ ಸರ್ಕಾರವು ಪರಿಶೀಲಿಸಿ, ದಿನಾಂಕ 22–08–2009ರ ಅಧಿಸೂಚನೆ ಸಂಖ್ಯೆ: ಒಇ 271 ಪೊಸಿಪ 2009 ರಲ್ಲಿ ಆದೇಶಿಸಿರುವ ವರ್ಗಾವಣೆಯನ್ನು ಮಾರ್ಪಡಿಸಿ ಶ್ರೀ ಎಂ. ಪ್ರಭಾಕರ್, ಎಸ್. ಪಿ. ಇವರನ್ನು ಆಂತರಿಕ ಭದ್ರತಾ ವಿಭಾಗ, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2373 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಬಾಂಬ್ ಬ್ಲಾಸ್ಟ್ ಪ್ರಕರಣಗಳಲ್ಲಿ ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಕಗೊಂಡಿದ್ದ ಶ್ರೀ ಹೆಚ್. ಎನ್. ನಿಲೋಗಲ್, ವಕೀಲರು ಇವರಿಗೆ ವಿಶೇಷ ಸಂಭಾವನೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಒಇ 510 ಪಿಪಿಇ 2005 ದಿನಾಂಕ: 27.07.2005
2. ಸರ್ಕಾರದ ತಿದ್ದುಪಡಿ ಸಂ: ಒಇ 510 ಪಿಪಿಇ 2005 ದಿನಾಂಕ: 28.10.2005
3. ಸರ್ಕಾರದ ಆದೇಶ ಸಂ: ಒಇ 614 ಪಿಪಿಇ 2006 ದಿನಾಂಕ: 18.08.2006
4. ಸರ್ಕಾರದ ಆದೇಶ ಸಂ: ಒಇ 382 ಪಿಪಿಇ 2006 ದಿನಾಂಕ: 9.02.2007
5. ಸರ್ಕಾರದ ಆದೇಶ ಸಂ: ಒಇ 532 ಪಿಪಿಇ 2008 ದಿನಾಂಕ: 29.04.2009
6. ಶ್ರೀ ಹೆಚ್. ಎನ್. ನಿಲೋಗಲ್, ವಿಶೇಷ ಸರ್ಕಾರಿ ಅಭಿಯೋಜಕರು ಇವರ ಪತ್ರ ದಿನಾಂಕ:04.12.2008.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ: 27–07–2005ರಲ್ಲಿ ಶ್ರೀ ಹೆಚ್.ಎನ್. ನಿಲೋಗಲ್, ವಕೀಲರು ಇವರನ್ನು ಬಾಂಬ್ ಬ್ಲಾಸ್ಟ್ ಪ್ರಕರಣಗಳಲ್ಲಿ ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಲಾಗಿತ್ತು.

ಮೇಲೆ (3) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 18–8–2006 ರಲ್ಲಿ ಅವರಿಗೆ ಸಂಭಾವನೆಯನ್ನು ನಿಗಧಿಗೊಳಿಸಲಾಗಿತ್ತು.

ಮೇಲೆ (4) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 9–02–2007 ರಲ್ಲಿ ಶ್ರೀ ಹೆಚ್.ಎನ್. ನಿಲೋಗಲ್ ಇವರಿಗೆ ಅವರ ಕೋರಿಕೆಯಂತೆ ಮಧ್ಯಂತರ ಸಂಭಾವನೆಯನ್ನು ಪಾವತಿಸಲಾಗಿತ್ತು.

ಮೇಲೆ (5) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 29–04–2009 ರಲ್ಲಿ ಶ್ರೀ ಹೆಚ್.ಎನ್. ನಿಲೋಗಲ್ ಇವರಿಗೆ ಅವರ ಕೋರಿಕೆಯಂತೆ ಅಂತಿಮ ಸಂಭಾವನೆಯನ್ನು ಪಾವತಿಸಲಾಗಿತ್ತು.

ಮೇಲೆ (6) ರಲ್ಲಿ ಓದಲಾದ ಪತ್ರ ದಿನಾಂಕ: 04–12–2008 ರಲ್ಲಿ ಶ್ರೀ ಹೆಚ್.ಎನ್. ನಿಲೋಗಲ್ ಇವರು ಅತ್ಯಂತ ಕಷ್ಟಕರ ಪ್ರಕರಣಗಳನ್ನು ನಡೆಸಿರುವುದರಿಂದ ಪ್ರತಿಯೊಂದು ಪ್ರಕರಣಕ್ಕೂ ಒಂದು ಲಕ್ಷದಂತೆ ನಾಲ್ಕು ಪ್ರಕರಣಗಳಿಗೆ ವಿಶೇಷ ಸಂಭಾವನೆಯನ್ನು ನೀಡುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 532 ಪಿಪಿಇ 2008, ದಿನಾಂಕ: 16ನೇ ಅಕ್ಟೋಬರ್ 2009**

ಬಾಂಬ್ ಬ್ಲಾಸ್ಟ್ ಪ್ರಕರಣಗಳಲ್ಲಿ ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಕಗೊಂಡಿದ್ದ ಶ್ರೀ ಹೆಚ್.ಎನ್. ನಿಲೋಗಲ್, ವಕೀಲರು ಇವರಿಗೆ ಪ್ರತಿಯೊಂದು ಪ್ರಕರಣಕ್ಕೂ ರೂ. ಇಪ್ಪತ್ತೈದು ಸಾವಿರದಂತೆ ನಾಲ್ಕೂ ಪ್ರಕರಣಗಳಿಗೆ ಒಟ್ಟು ರೂ. ಒಂದು ಲಕ್ಷ ವಿಶೇಷ ಸಂಭಾವನೆಯನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು "ಲೆಕ್ಕಶೀರ್ಷಿಕೆ 214 ನ್ಯಾಯಾಡಳಿತ 114 ಲೀಗಲ್ ಅಡ್ವೈಸರ್ಸ್ ಅಂಡ್ ಕೌನ್ಸಿಲ್ಸ್–01–ಅಡ್ವೋಕೇಟ್ ಜನರಲ್ (payment for professional and special services in the budget)" ರಡಿಯಲ್ಲಿ ಭರಿಸತಕ್ಕದ್ದು.

ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 542 ವೆಚ್ಚ – 11/09 ದಿನಾಂಕ: 11–08–2009 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2381 **ಕೆ.ಸಿ. ಸಿದ್ದಪ್ಪ**

ಒಳಾಡಳಿತ ಇಲಾಖೆ ಕಾ. ಮತ್ತು ಸು., ಕಾಫಿಪೋಸ ಮತ್ತು ಅಭಿಯೋಗಗಳು

**ವಿಷಯ:** ಶ್ರೀ ಹನುಮಂತಪ್ಪ ವಿಠ್ಠಪ್ಪ ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಹಾವೇರಿ ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕಣರದ ಅಭಿಯೋಜನಾ ಮಂಜೂರಾತಿ ಕುರಿತು

**ಉಲ್ಲೇಖ:**
1. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ ಲೋಕ್/ ಐಎನ್‌ವಿ (ಜಿ) /ಎಲ್.20 / ಸಿಆರ್–4/2009/ಹಾವೇರಿ ದಿನಾಂಕ: 29–08–2009.
2. ತನಿಖಾಧಿಕಾರಿಯ ವರದಿ ದಿನಾಂಕ:29–08–2009.
3. ತನಿಖಾ ದಾಖಲೆಗಳಾದ ಪಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಓದಲಾಗಿದೆ:**

ಶ್ರೀ ಹನುಮಂತಪ್ಪ ವಿಠ್ಠಪ್ಪ ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಹಾವೇರಿ ಪ್ರಭಾರ ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಸವಣೂರು ಹಾವೇರಿ ಜಿಲ್ಲೆ ಇವರ ವಿರುದ್ಧ ಮೊಕದ್ದಮೆ ಸಂಖ್ಯೆ:4/2009 ಕಲಂ 7, 13(1)(ಡಿ) ಸಹ ಕಲಂ 13(2)ರ ಲಂಚ ನಿರೋಧಕ ಕಾಯ್ದೆ 1988 ರ ಅಡಿಯಲ್ಲಿ ಆರಕ್ಷಕ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಹಾವೇರಿ ಪೊಲೀಸ್ ಠಾಣೆಯಲ್ಲಿ, ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ತನಿಖಾ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು ಉಲ್ಲೇಖ (2) ಮತ್ತು (3) ರೊಡನೆ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ: 29.08.2009 (ಉಲ್ಲೇಖ 1)ರೊಡನೆ ಕಳುಹಿಸುತ್ತಾ ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು, ಲಂಚ ನಿರೋಧಕ ಕಾಯ್ದೆ 19(ಸಿ) ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಉಲ್ಲೇಖ (1)ರ ಪತ್ರ ದಿನಾಂಕ: 29.08.2009 ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

(1) ಶ್ರೀ ಕರಿಯಪ್ಪ ನೀಲಪ್ಪ ಮೇಡ್ಲೇರಿ, ಸಾ: ಚಿಕ್ಕಹುಲ್ಲಾಳ ಗ್ರಾಮ ತಾ: ಹಾನಗಲ್ ಜಿ: ಹಾವೇರಿ ಇವರ ಫಿರ್ಯಾದಿ ದಿನಾಂಕ: 02.06.009
(2) ಪ್ರಥಮ ವರ್ತಮಾನ ವರದಿ, ಲೋಕಾಯುಕ್ತ ಪೊಲೀಸ್ ಠಾಣೆ, ಹಾವೇರಿ ಪ್ರಕರಣ ಸಂಖ್ಯೆ:4/09
(3) ಪ್ರಾಯೋಗಿಕ ಪಂಚನಾಮೆ ದಿನಾಂಕ: 03.06.2009
(4) ಅಮಾನತ್ತು ಪಂಚನಾಮೆ ದಿನಾಂಕ: 03.06.2009
(5) ಪ್ರಾದೇಶಿಕ ಸಹಾಯಕ ರಸಾಯನಿಕ ತಜ್ಞರು, ಧಾರವಾಡ ಇವರ ವರದಿ ಪತ್ರ ಸಂಖ್ಯೆ: ಎಲ್‌ವಾಯ್‌ಕೆ/ಎಸಿಇ/ ಡಿಡಬ್ಲ್ಯುಡಿ/09/2009 ದಿನಾಂಕ:11.06.2009
(6) ಕೃತ್ಯ ನಡೆದ ಸ್ಥಳದ ನಕಾಶೆ:
(7) ಮೊಬೈಲ್ ಕಾಲ್ ರಿಜಿಸ್ಟರ್ ಪ್ರತಿಗಳು

**ಸಾಕ್ಷಿಗಳ ಹೇಳಿಕೆಗಳು:**

(1) ಶ್ರೀ ಕರಿಯಪ್ಪ ನೀಲಪ್ಪ ಮೆಡ್ಲೇರಿ, ಸಾ; ಚಿಕ್ಕಹುಲ್ಲಾಳ, ತಾ: ಹಾನಗಲ್, ಹಾವೇರಿ ಜಿಲ್ಲೆ
(2) ಶ್ರೀ ಮಂಜುನಾಥ ಲೋಕಣ್ಣ ಮಾಲಗಿಮನಿ, ಗೋಪನಕೊಪ್ಪ ಹುಬ್ಬಳ್ಳಿ
(3) ಶ್ರೀ ನೀಲಪ್ಪ ಹನುಮಂತಪ್ಪ ಜಂಗಳಿ, ಹೊಸರಿತ್ತಿ ತಾ: ಹಾವೇರಿ
(4) ಶ್ರೀ ಫಕ್ಕೀರಪ್ಪ ವೆಂಕಪ್ಪ ಕೊಣ್ಣೂರು, ಬೆರಳಚ್ಚುಗಾರ, ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಸವಣೂರು, ಹಾವೇರಿ ಜಿಲ್ಲೆ
(5) ಶ್ರೀ ಸಿದ್ದಪ್ಪ ಶಂಭುಲಿಂಗಪ್ಪ ಅಜ್ಜಣ್ಣನವರ, ಕುರುಬರಮಲ್ಲೂರು, ಸವಣೂರು ತಾ: ಹಾವೇರಿ
(6) ಶ್ರೀ ಹಾಜಿಮಲಸಿಂಗ್ ದಸ್ತಗೀರಸಾಬ ಚಪ್ಪರಬಂಧ, ಕಿರಿಯ ಇಂಜಿನಿಯರ್, ಸಹಾಯಕ ಕಾರ್ಯಪಾಲಕ ಅಭಿಯಂತರ ಕಛೇರಿ, ಲೋಕೋಪಯೋಗಿ ಇಲಾಖೆ, ಸವಣೂರು
(7) ಶ್ರೀ ಸೋಮಶೇಖರ ಶಾಂತಪ್ಪ ಕುಬ್ಯಾಲ, ಮುಖ್ಯಪೇದೆ, ಲೋಕಾಯುಕ್ತ ಪೊಲೀಸ್ ಠಾಣೆ, ಹಾವೇರಿ.
(8) ಶ್ರೀ ಉದಯ ಕೃಷ್ಣರಾವ್ ಕುಲಕರ್ಣಿ, ಮುಖ್ಯ ಪೇದೆ, ಲೋಕಾಯುಕ್ತ, ಪೊಲೀಸ್ ಠಾಣೆ, ಹಾವೇರಿ
(9) ಶ್ರೀ ಬಸವರಾಜ ಬಸಪ್ಪ ಹರವಿ, ಪೇದೆ, ಲೋಕಾಯುಕ್ತ ಪೊಲೀಸ್ ಠಾಣೆ, ಹಾವೇರಿ
(10) ಶ್ರೀ ಸುರೇಶ ಶಿವಪ್ಪ ಲಮಾಣಿ, ಪೇದೆ, ಲೋಕಾಯುಕ್ತ ಪೊಲೀಸ್ ಠಾಣೆ, ಹಾವೇರಿ.
(11) ಶ್ರೀ ನಿಂಗಪ್ಪ ಗುಡ್ಡಪ್ಪ ಕನವಳ್ಳಿ, ಮುಖ್ಯ ಪೇದೆ, ಲೊಖಾಯುಕ್ತ ಪೊಲೀಸ್ ಠಾಣೆ, ಹಾವೇರಿ.
(12) ಶ್ರೀ ಎಂ. ಡಿ. ಹಿರೇಮಠ, ಪೊಲೀಸ್ ಪೇದೆ, ಲೋಕಾಯುಕ್ತ, ಪೊಲೀಸ್ ಠಾಣೆ, ಹಾವೇರಿ
(13) ಶ್ರೀ ಹೆಚ್. ಡಿ. ಪವನ ಕುಮಾರ, ಸಿಸಿಟಿ, ದಾವಣಗೆರೆ ಲೋಕಾಯುಕ್ತ ರವರ ಕಛೇರಿ ಲಂಚ ಕೇಳಲು ಆಧಾರವಾದ ದಾಖಲೆಗಳು

(1) ಸವಣೂರು ಜೆ.ಎಂ.ಎಫ್.ಸಿ ನ್ಯಾಯಾಲಯದಲ್ಲಿ ಪಿರ್ಯಾದಿದಾರರು ಸವಣೂರು ಪೊಲೀಸರಿಗೆ ಕೊಟ್ಟ ದೂರು, ತನಿಖೆ ಮುಗಿದು ನ್ಯಾಯಾಲಯದ ವಿಚಾರಣೆಗೆ ಒಳಪಟ್ಟು ಸಿಸಿ ನಂ. 291/08ರ ಕಡತ
(2) ಆಪಾದಿತ ಶ್ರೀ ಹೆಚ್.ವಿ. ಕಾಳಪ್ಪನವರ್ ಇವರು ಜೆ.ಎಂ.ಎಫ್.ಸಿ ನ್ಯಾಯಾಲಯ ಸವಣೂರಿಗೆ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ನೇಮಿಸಿದ ಆದೇಶ ಸಂಖ್ಯೆ: ಡಿಪಿಎನ್/ಸಿಶಾ/149/2007–08 ದಿನಾಂಕ: 15–10–2008ರ ಪ್ರತಿ.
(3) ಆಪಾದಿತ ಶ್ರೀ ಹೆಚ್.ವಿ. ಕಾಳಪ್ಪನವರ್ ಇವರು ಪ್ರಭಾರ ಹುದ್ದೆಯನ್ನು ವಹಿಸಿಕೊಂಡ ಬಗ್ಗೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಬೆಂಗಳೂರು ಇವರಿಗೆ ಬರೆದ ಪತ್ರ ಸ/ಸ/ಅ/ಸ/ಸ/ವಾ/ ಸವಣೂರು/ 131/08–09 ದಿನಾಂಕ : 4–11–2009ರ ಪತ್ರ
(4) ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿ ಇಟ್ಟಿದ್ದ ಹಾಜರಿ ಪುಸ್ತಕದ ದೃಡೀಕೃತ ಜೆರಾಕ್ಸ್ ಪ್ರತಿ.
(5) 'ಎ' ಡೈರಿ ದಿನಾಂಕ: 3.6.2009 ರಂದು ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ವಿಚಾರಣೆಗೆ ನಿಗದಿಯಾದ ಕೇಸುಗಳ ವಿವರಗಳನ್ನು ಒಳಗೊಂಡ ಧೃಢೀಕೃತ ಜೆರಾಕ್ಸ್ ಪ್ರತಿ

**ಆಪಾದಿತರ ಸಮಜಾಯಿಷಿ ಹೇಳಿಕೆಗಳು:–**

ಶ್ರೀ ಹನುಮಂತಪ್ಪ ವಿಠ್ಠಪ್ಪ ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು, ಹಾವೇರಿ ಇವರು ದಿನಾಂಕ:3.6.2009 ರಂದು ತನಿಖಾಧಿಕಾರಿಗಳಿಗೆ ಸ್ವರಕ್ಷಣಾ ಹೇಳಿಕೆ

ತನಿಖಾಧಿಕಾರಿಗಳಾದ ಶ್ರೀ ಜಿ. ಗುರುದತ್ತ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಹಾವೇರಿ ವಿಭಾಗ ಇವರು, ಶ್ರೀ ಹನುಮಂತಪ್ಪ ವಿಠ್ಠಪ್ಪ ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು, ಹಾವೇರಿ ಪ್ರಭಾರ ಸಹಾಯಕ

ಸರ್ಕಾರಿ ಅಭಿಯೋಜಕರು, ಜೆ. ಎಂ. ಎಫ್. ಸಿ. ನ್ಯಾಯಾಲಯ, ಸವಣೂರು, ಹಾವೇರಿ ಜಿಲ್ಲೆ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ, ಹಾವೇರಿ ಪೊಲೀಸ್ ಠಾಣೆಯಲ್ಲಿ ಮೊಕದ್ದಮ್ಮೆ ಸಂಖ್ಯೆ 4/2009 ರಲ್ಲಿ ಲಂಚ ನಿರೋಧಕ ಕಾಯ್ದೆ 1988ರ ಕಲಂ 7ರ ಅಡಿಯಲ್ಲಿ ಪ್ರಕರಣವನ್ನು ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ಹನುಮಂತಪ್ಪ ವಿಠ್ಠಪ್ಪ ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು, ಹಾವೇರಿ ಪ್ರಭಾರ ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಸವಣೂರು, ಹಾವೇರಿ ಜಿಲ್ಲೆ ಇವರ ವಿರುದ್ಧ ಪಿರ್ಯಾದುದಾರರಾದ ಶ್ರೀ ಕರಿಯಪ್ಪ ನೀಲಪ್ಪ ಮೆಡ್ಲೇರಿ ಸಾ: ಚಿಕ್ಕಹುಲ್ಲಾಳರವರು ತಾನು ದಿನಾಂಕ:1.2.2008ರಂದು ಸವಣೂರು ಪೊಲೀಸರಿಗೆ ನೀಡಿದ್ದ ಮೌಖಿಕ ದೂರನ್ನು ಸವಣೂರು ಠಾಣೆಯ ಮೊಕದ್ದಮೆ ನಂ 25/08 ರಲ್ಲಿ ದಾಖಲಿಸಿ ತನಿಖೆಯನ್ನು ಪೂರೈಸಿ ಆರೋಪಿಗಳ ವಿರುದ್ಧ ಆರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತಾರೆ. ಕೇಸು ವಿಚಾರಣೆಗೆ ಬಂದು ತಾನು ಮತ್ತು ಇತರೆ ಸಾಕ್ಷಿಗಳು ಕೋರ್ಟಿಗೆ ಮೊದಲ ಸಲ ಹಾಜರಾದಾಗ ಸರ್ಕಾರಿ ವಕೀಲರಾದ ಶ್ರೀ ಹೆಚ್. ವಿ. ಕಾಳಪ್ಪನವರ್, ಸಾಕ್ಷಿಗಳಿಗೆ ಸರಿಯಾದ ರೀತಿಯಲ್ಲಿ ತಿಳುವಳಿಕೆ ಕೊಟ್ಟು ಕೋರ್ಟಿನ ಮುಂದೆ ಅವರು ಸಾಕ್ಷಿ ಹೇಳುವಂತೆ ಅವರುಗಳಿಗೆ ತಿಳುವಳಿಕೆ ಕೊಡುವ ಸಲುವಾಗಿ ತನ್ನಿಂದ 500/– ರೂಗಳನ್ನು ಕೇಳಿ ಪಡೆದರು. ನಂತರದ ಮುದ್ದತ್ತು ದಿನಾಂಕ: 26.5.2009 ರಂದು ಇದ್ದು ಆ ದಿನ ಸಾಕ್ಷಿಗಳನ್ನು ಕರೆದುಕೊಂಡು ಹೋದ ನನ್ನ ಮಾವ ಸಿದ್ಧಪ್ಪನ ಕಡೆಯಿಂದಲೂ ಸಹ ಸಾಕ್ಷಿಗಳಿಗೆ ಸಾಕ್ಷ್ಯವನ್ನು ಹೇಳಿ ಕೊಡಲು 500/– ರೂಗಳನ್ನು ತೆಗೆದುಕೊಂಡಿರುತ್ತಾರೆ. ಅದೇ ದಿನ ತಾನು ಆಪಾದಿತ ಕಾಳಪ್ಪನವರ್‌ನ್ನು ಭೇಟಿಯಾಗಿ ವಿಚಾರಣೆ ನಡೆಯಲಿರುವ ಮುಂದಿನ ಸಾಕ್ಷಿಗಳ ಬಗ್ಗೆ ಚರ್ಚಿಸಿದಾಗ ಕಾಳಪ್ಪನವರ್ ಉಳಿದ ಸಾಕ್ಷಿಗಳಿಗೆ ಸಾಕ್ಷಿ ಹೇಳುವ ಬಗ್ಗೆ ತಿಳುವಳಿಕೆ ಕೊಡುವ ಸಲುವಾಗಿ ನೀವು ಇನ್ನೂ ಹಣ ಕೊಡಬೇಕಾಗುತ್ತದೆ ಎಂದು ಹೇಳಿ ಕಳುಹಿಸಿದರು. ಮುಂದಿನ ಮುದ್ದತ್ತು ದಿನಾಂಕ:03.06.2009 ನಿಗದಿಯಾದ ಕಾರಣ ಆಪಾದಿತರು ಲಂಚ ತರಲು ತಿಳಿಸಿದ್ದರಿಂದ ನಾನು ದಿನಾಂಕ:02.06.2009 ರಂದು ಆಪಾದಿತ ಕಾಳಪ್ಪನವರ್‌ನ್ನು ಫೋನ್ ಮೂಲಕ ಸಂಪರ್ಕಿಸಿದಾಗ ನೀವು ಹೇಳಿದಂತೆ ಎಷ್ಟು ಹಣ ತರಬೇಕು ಎಂದು ವಿಚಾರಿಸಿದಾಗ ಕಾಳಪ್ಪನವರ್ ರೂ. 1,000/– ಗಳ ಲಂಚದ ಹಣ ತರುವಂತೆ ತಿಳಿಸಿರುತ್ತಾರೆ ಎಂಬುದಾಗಿ ತನ್ನ ಪಿರ್ಯಾದಿಯಲ್ಲಿ ಆಪಾದನೆ ಮಾಡಿ ದೂರು ನೀಡಿರುತ್ತಾರೆ. ಸದರಿ ದೂರನ್ನು ದಿನಾಂಕ:02.06.2009 ರಂದು ಶ್ರೀ ಹೆಚ್.ವಿ. ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು ಹಾವೇರಿ, ಪ್ರಭಾರ ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಸವಣೂರುರವರ ವಿರುದ್ಧ ದೂರು ದಾಖಲಿಸಿಕೊಂಡ ಬಳಿಕ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ:03.06.2009 ರಂದು ಸವಣೂರಿನ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿರುವ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ, ಶ್ರೀ ಹೆಚ್.ವಿ. ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು ಹಾವೇರಿ, ಪ್ರಭಾರ ಸಹಾಯಕ ಸರ್ಕಾರಿ ಅಭಿಯೋಜಕರು, ಜೆ. ಎಂ. ಎಫ್. ಸಿ. ನ್ಯಾಯಾಲಯ ಸವಣೂರು ರವರು ಅಕ್ರಮ ಸಂಭಾವನೆಯಾದ ರೂ. 1,000/– ಗಳನ್ನು ಪಿರ್ಯಾದುದಾರರಿಂದ ಪಡೆದು ತಮ್ಮ ಶರ್ಟಿನ ಎಡ ಎದೆಯ ಜೇಬಿನಲ್ಲಿ ಇಟ್ಟುಕೊಂಡಾಗ ಸಿಕ್ಕಿ ಹಾಕಿಕೊಂಡಿರುತ್ತಾರೆ. ನಂತರ ಸದರಿ ನೌಕರನ ಬಲಗೈ ಮತ್ತು ಎಡಗೈ ಬೆರಳುಗಳನ್ನು ಹಣ ಇಟ್ಟುಕೊಂಡಿದ್ದ ಪರ್ಸಿನ ಭಾಗವನ್ನು ಹತ್ತಿಯ ತುಣುಕಿನಿಂದ ಒರೆಸಿ ಸದರಿ ಹತ್ತಿಯ ತುಣುಕನ್ನು ಹಾಗೂ ಆಪಾದಿತ ತೊಟ್ಟಿದ್ದ ಶರ್ಟಿನ ಜೇಬನ್ನು ಪ್ರತ್ಯೇಕವಾಗಿ ಸೋಡಿಯಂ ಕಾರ್ಬನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ, ಪಿನಾಪ್ತಿಲಿನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ದೃಢಪಟ್ಟಿರುತ್ತದೆ. ಆರೋಪಿತ ಅಧಿಕಾರಿ ಅಕ್ರಮ ಸಂಭಾವನೆಯನ್ನು ಪಡೆಯುವ ಸಂದರ್ಭದಲ್ಲಿ ಪಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರನ ನಡುವಿನ ವ್ಯವಹಾರವನ್ನು ನೆರಳು ಸಾಕ್ಷಿಯು ಗಮನಿಸಿ, ಲಂಚದ ಹಣ ಕೇಳಿ ಪಡೆದಿರುವುದನ್ನು ಸಾಕ್ಷಿ ಮಾಡಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 1,000/– ಗಳನ್ನು ಹೆಚ್. ವಿ. ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು ಹಾವೇರಿ, ಪ್ರಭಾರ ಸಹಾಯಕ ಸರ್ಕಾರಿ ಅಭಿಯೋಜಕರು, ಜೆ. ಎಂ. ಎಫ್. ಸಿ. ನ್ಯಾಯಾಲಯ, ಸವಣೂರು ರವರ ಕಛೇರಿಯಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾಧಿತರು ಲಂಚ ನಿರೋಧ ಕಾಯ್ದೆ 1988 ರ ಕಲಂ 7,13(1)(ಡಿ)ರ ಸಹ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಸರ್ಕಾರಕ್ಕೆ ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಖಾಯ್ದೆ–1988ರ ಅನ್ವಯ ಕಲಂ 7,13(1)(ಡಿ) ಸಹ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಅಪಾಧಿತನನ್ನು ಕೆಲಸದಿಂದ ತೆಗೆದುಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(ಸಿ)ರ ಅಡಿ ಆಪಾದಿತ ಶ್ರೀ ಹನುಮಂತಪ್ಪ ವಿಠ್ಠಪ್ಪ ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು ಹಾವೇರಿ, ಪ್ರಭಾರ ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಸವಣೂರು ಇವರನ್ನು ಕಲಂ, 7, 13(1) (ಡಿ) ಸಹ ಕಲಂ 13(2) ರ ಲಂಚ ನಿರೋಧ ಕಾಯ್ದೆ, 1988ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ.

ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 292 ಪಿಪಿಇ 2009, ದಿನಾಂಕ: 12ನೇ ಅಕ್ಟೋಬರ್ 2009**

ಶ್ರೀ ಹನುಮಂತಪ್ಪ ವಿಠ್ಠಪ್ಪ ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು ಹಾವೇರಿ, ಪ್ರಭಾರ ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಸವಣೂರು, ಹಾವೇರಿ ಜಿಲ್ಲೆ ಇವರನನು ತೆಗೆದು ಹಾಕುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತ ಶ್ರೀ ಹನುಮಂತಪ್ಪ ವಿಠ್ಠಪ್ಪ ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು ಹಾವೇರಿ, ಪ್ರಭಾರ ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಸವಣೂರು, ಹಾವೇರಿ ಜಿಲ್ಲೆ ಇವರ ವಿರುದ್ಧ ಕಲಂ 7, 13(1) (ಡಿ) ಜೊತೆಯಲ್ಲಿ ಓದಲಾದ ಕಲಂ 13 (2) ರ ಲಂಚ ನಿರೋಧಕ ಕಾಯ್ದೆ 1988ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಲಾಗಿದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿರ್ವಹಣೆ ನಿಯಮಾವಳಿ 1977ರ ನಿಯಮ 19(1) ರನ್ವಯ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ : 12 ನೇ ಅಕ್ಟೊಬರ್ 2009 ರಂದು ಹೊರಡಿಸಲಾಗಿದೆ.

ಕರ್ನಾಟಕ ಸರ್ಕಾರದ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಸಿದ್ದಪ್ಪ**

ಪಿ.ಆರ್. 2382

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ.
(ಕಾ ಮತ್ತು ಸು, ಕಾಫಿಪೋಸ ಮತ್ತು ಅಭಿಯೋಗ)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಎ. ಗೋವಿಂದ ಭಟ್, ವಿಶೇಷ ತಹಶೀಲ್ದಾರ್, ಗುಳೇದಗುಡ್ಡ, ಬಾದಾಮಿ ತಾ: ಬಾಗಲಕೋಟೆ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಮಾನ್ಯ ಉನ್ನತ ಶಿಕ್ಷಣ ಸಚಿವರ ನಡವಳಿಯ ದಿ: 11.10.2009.

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆಯಲ್ಲಿ ನೆರೆಪೀಡಿತ ಪ್ರದೇಶಗಳಿಗೆ ಮಾನ್ಯ ಉನ್ನತ ಶಿಕ್ಷಣ ಸಚಿವರು ಭೇಟಿ ನೀಡಿದಾಗ ಅಲ್ಲಿರುವ ಸಾರ್ವಜನಿಕರು ಶ್ರೀ ಎ. ಗೋವಿಂದ ಭಟ್, ವಿಶೇಷ ತಹಶಿಲ್ದಾರ್, ಗುಳೇದಗುಡ್ಡ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇವರು ನೆರೆ ಪೀಡಿತ ಪ್ರದೇಶಗಳಲ್ಲಿ ಪ್ರವಾಹದಿಂದ ಭಾದಿತವಾದ ಜನರ ರಕ್ಷಣೆ ಮಾಡಲು ಕ್ರಮ ಕೈಗೊಂಡಿಲ್ಲವೆಂದು ಹಾಗೂ ದಿನಾಂಕ: 29.9.2009 ರಿಂದ ದಿ: 4.10.2009 ರವರೆಗೆ ಉಂಟಾದ ಅತಿವೃಷ್ಟಿ ಸಂಧರ್ಬದಲ್ಲಿ ಸಮರ್ಪಕವಾಗಿ ಕರ್ತವ್ಯ ನಿರ್ವಹಿಸಿಲ್ಲ ಹಾಗೂ ಸದರಿಯವರ ಕರ್ತವ್ಯ ಲೋಪದ ಬಗ್ಗೆ ಸಾರ್ವಜನಿಕರಿಂದ ಅನೇಕ ಮೌಖಿಕ ದೂರುಗಳು ಬಂದಿರುತ್ತದೆ. ಆದ್ದರಿಂದ, ಈ ಕುರಿತು ವಿಚಾರಣೆಯನ್ನು ಕಾಯ್ದಿಸಿರಿ ಶ್ರೀ ಎ. ಗೋವಿಂದ ಭಟ್, ವಿಶೇಷ ತಹಶೀಲ್ದಾರ್, ಗುಳೇದಗುಡ್ಡ ಇವರನ್ನು ಅಮಾನತ್ತಿನಲ್ಲಿಡಲು ಮೇಲೆ ಓದಲಾದ ನಡುವಳಿಯಲ್ಲಿ ಮಾನ್ಯ ಉನ್ನತ ಶಿಕ್ಷಣ ಸಚಿವರು ಕೋರಿರುತ್ತಾರೆ.

ಪ್ರಕೃತಿ ವಿಕೋಪದಂತಹ ಸಮಯದಲ್ಲಿ ಜನರ ರಕ್ಷಣೆಗೆ ಕ್ರಮ ಕೈಗೊಳ್ಳದಿರುವುದು ಗಂಭೀರ ಸ್ವರೂಪದ ತಪ್ಪೆಸಗಿರುವುದರಿಂದ ಹಾಗೂ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ (ನಡತೆ) ನಿಯಮಗಳು 1966 ನ್ನು ಉಲ್ಲಂಘಿಸಿದಂತಾಗಿದ್ದು, ಶ್ರೀ ಎ. ಗೋವಿಂದಭಟ್, ವಿಶೇಷ ತಹಶೀಲ್ದಾರ್, ಗುಳೇದ ಗುಡ್ಡ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇವರನ್ನು ಅಮಾನತ್ತಿನಲ್ಲಿಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 24 ಎಡಿಇ 2009, ಬೆಂಗಳೂರು, ದಿನಾಂಕ: 12ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ, ನಿಯಮ 10(1) (ಡಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎ. ಗೋವಿಂದಭಟ್, ವಿಶೇಷ ತಹಶೀಲ್ದಾರ್, ಗುಳೇದಗುಡ್ಡ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇವರನ್ನು ಇಲಾಖಾ ವಿಚಾರಣೆ ಬಾಕಿ ಇರಿಸಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98ರನ್ವಯ ಜೀವನಾಧಾರ ಭತ್ಯೆ ಪಡೆಯಲು ಆರ್ಹರಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರ ಅನುಮತಿ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದಲ್ಲ.

ಜಿಲ್ಲಾಧಿಕಾರಿಗಳ ಕಛೇರಿ ಬಾಗಲಕೋಟೆ ಜಿಲ್ಲೆ ಇಲ್ಲಿ ಚುನಾವಣಾ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಎ.ಪಿ. ಕೃಷ್ಣ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವಿಶೇಷ ತಹಶೀಲ್ದಾರ್, ಗುಳೇದಗುಡ್ಡ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇಲ್ಲಿನ ಹುದ್ದೆಯಲ್ಲಿ ಅಧಿಕ ಪ್ರಭಾರದಲ್ಲಿ ಇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2385

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** 2009–10ನೇ ಸಾಲಿನಲ್ಲಿ ಭಾರಿ ಮಳೆ ಹಾಗೂ ಪ್ರವಾಹದ ವಿಕೋಪಗಳಿಂದ ಆಗಿರುವ ಹಾನಿಗಳಿಗೆ ತುರ್ತು ಪರಿಹಾರ ಕ್ರಮ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ:**

2009ನೇ ಸೆಪ್ಟೆಂಬರ್ ಮಾಹೆಯ ಅಂತ್ಯದಲ್ಲಿ ಹಾಗೂ ಅಕ್ಟೋಬರ್ ಮಾಹೆಯ ಮೊದಲ ವಾರದಲ್ಲಿ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಬಿದ್ದ ಭಾರಿ ಮಳೆಯಿಂದ ಉಂಟಾದ ಪ್ರವಾಹ ಪರಿಸ್ಥಿತಿಯಿಂದಾಗಿ ಬಾಗಲಕೋಟೆ, ಬಿಜಾಪುರ, ಗದಗ, ರಾಯಚೂರು, ಕೊಪ್ಪಳ, ಬಳ್ಳಾರಿ, ಗುಲ್ಬರ್ಗಾ, ಧಾರವಾಡ, ಹಾವೇರಿ, ಬೆಳಗಾಂ, ಹಾಗೂ ಚಿತ್ರದುರ್ಗ, ದಾವಣಗೆರೆ, ಉತ್ತರ ಕನ್ನಡ ಜಿಲ್ಲೆಗಳಲ್ಲಿ ಮಾನವ ಜೀವಹಾನಿ, ಜಾನುವಾರುಹಾನಿ, ಮನೆಹಾನಿ, ಬೆಳೆಹಾನಿ ಹಾಗೂ ಮೂಲಭೂತ ಸೌಕರ್ಯಗಳಿಗೆ ಹಾನಿ ಉಂಟಾಗಿದೆ. ಈ ಜಿಲ್ಲೆಗಳಲ್ಲಿ ಜೀವಹಾನಿ, ಬೆಳೆಹಾಣಿ, ಮನೆಹಾನಿ, ಮೂಲಭೂತ ಸೌಕರ್ಯಗಳ ಹಾನಿಗೆ ತುರ್ತು ಪರಿಹಾರ ಕಾರ್ಯ ಕೈಗೊಳ್ಳಲು ಹಣ ಬಿಡುಗಡೆ ಮಾಡುವ ಅವಶ್ಯಕತೆಯಿರುವುದನ್ನು ಪರಿಗಣಿಸಿ ಸರ್ಕಾರವು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಹಣ ಬಿಡುಗಡೆ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 137 ಟಿಎನ್‌ಆರ್ 2009 ಬೆಂಗಳೂರು, ದಿನಾಂಕ: 9ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ರೂ. 10,000.00 ಲಕ್ಷಗಳ ಅನುದಾನವನ್ನು ಬಿಡಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|
| 1 | ಬಾಗಲಕೋಟೆ | 1000.00 |
| 2 | ಬಿಜಾಪುರ | 1000.00 |
| 3 | ಗದಗ | 1000.00 |
| 4 | ರಾಯಚೂರು | 1000.00 |
| 5 | ಕೊಪ್ಪಳ | 1000.00 |
| 6 | ಬಳ್ಳಾರಿ | 1000.00 |
| 7 | ಗುಲಬರ್ಗಾ | 500.00 |
| 8 | ಬೆಳಗಾಂ | 1000.00 |
| 9 | ಧಾರವಾಡ | 1000.00 |
| 10 | ಹಾವೇರಿ | 200.00 |
| 11 | ದಾವಣಗೆರೆ | 500.00 |
| 12 | ಚಿತ್ರದುರ್ಗ | 500.00 |
| 13 | ಉತ್ತರ ಕನ್ನಡ | 300.00 |
| | **ಒಟ್ಟು** | **10,000.00** |

**(ರೂ. ಹತ್ತು ಸಾವಿರ ಲಕ್ಷಗಳು ಮಾತ್ರ)**

1) ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಈ ಕೆಳಕಂಡಂತೆ ಆದ್ಯತೆಯ ಮೇರೆಗೆ ಉಪಯೋಗಿಸುವುದು.

a) ಮಾವನ / ಪ್ರಾಣಿ ಜೀವಹಾನಿ

b) ಮನೆ ಹಾನಿ.

c) ಬೆಳೆಹಾನಿ

d) ಹಾನಿಗೊಳಗಾದ ಮೂಲಭೂತ ಸೌಕರ್ಯಗಳಿಗೆ ತುರ್ತು ರಿಪೇರಿ.

e) ಕುಡಿಯುವ ನೀರಿನ ವ್ಯವಸ್ಥೆ

f) ಸಂಕ್ರಾಮಿಕ ರೋಗ ತಡೆಗಟ್ಟಲು ಹಾಗೂ ನೈರ್ಮಲ್ಲೀಕರಣಕ್ಕೆ.

g) ಜಾನುವಾರುಗಳ ಸಂರಕ್ಷಣೆ.

2) ಕೇಂದ್ರ ಸರ್ಕಾರವು ಹೊರಡಿಸಿರುವ ಸಿಆರ್‌ಎಫ್/ ಎನ್‌ಸಿಸಿಎಫ್ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು.

3) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಸಿಆರ್‌ಎಫ್/ ಎನ್‌ಸಿಸಿಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ. ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸವುದು. ಈ ಷರತ್ತು ಪ್ರವಾಹ ಪೀಡಿತ ಜಿಲ್ಲೆಗಳಲ್ಲಿ ಸಿಆರ್‌ಎಫ್/ ಎನ್‌ಸಿಸಿಎಫ್ ನಾರ್ಮ್ಸ್ ಪ್ರಕಾರ 30 ದಿವಸ ಹಾಗೂ 45 ದಿವಸಗಳಲ್ಲಿ ಕೈಗೊಳ್ಳುವ ಕಾಮಗಾರಿಗಳಿಗೆ ಅನ್ವಯಿಸುವುದಿಲ್ಲ.

4) ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯಿಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್ ಪಿ.ಡಿ.ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–02–110–0–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ / ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 692 ವೆಚ್ಚ–7/2009(ಭಾ) ದಿನಾಂಕ:08.10.2009 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ದೇಸಾಯಿ**

ಪಿ.ಆರ್. 2386

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ

ಕಂದಾಯ ಇಲಾಖೆ, (ವಿಪತ್ತು ನಿರ್ವಹಣೆ ಮತ್ತು ಸೇವೆಗಳು)

## REVENUE SECRETARIAT

## NOTIFICATION

**No RD 212 TNR 2009, Bangalore, Dated: 12th October 2009**

Excessive rains and floods in the month of September-October 2009 have caused extensive loss of life, live stock, houses, crops and damages to the infrastructure in the following taluks of the state.

| Sl. No. | Districts | Taluks |
|---|---|---|
| 1. | Belgaum (10 Taluks) | 1) Belgaum<br>2) Khanapur<br>3) Hukkeri<br>4) Baihongal<br>5) Savadatti<br>6) Ramadurga<br>7) Gokak<br>8) Chikkodi<br>9) Raibagh<br>10) Athani |
| 2. | Gulbarga (10 Taluks) | 11) Gulbarga<br>12) Afzalpur |

| Sl. No. | Districts | Taluks |
|---|---|---|
| | | 13) Aland<br>14) Jewargi<br>15) Yadagir<br>16) Shahapur<br>17) Shorapur<br>18) Sedam<br>19) Chincholi<br>20) Chittapur |
| 3. | Raichur (5 Taluks) | 21) Raichur<br>22) Manvi<br>23) Devadurga<br>24) Lingasugur<br>25) Sindhanur |
| 4. | Bijapur (5 Taluks) | 26) Bijapur<br>27) Sindagi<br>28) Indi<br>29) B. Bagewadi<br>30) Muddebihal |
| 5. | Dharwad (5 Taluks) | 31) Dharwad<br>32) Hubli<br>33) Kalghatagi<br>34) Kundagol<br>35) Navalgunda |
| 6. | Bagalkote (6 Taluks) | 36) Bagalkote<br>37) Badami<br>38) Hunagunda<br>39) Jamakhandi<br>40) Bilagi<br>41) Mudhol |
| 7. | Koppal (4 Taluks) | 42) Koppal<br>43) Gangavathi<br>44) Kustagi<br>45) Yelburga |
| 8. | Bellary (7 Taluks) | 46) Bellary<br>47) Hadagali<br>48) Hagaribommanahalli<br>49) Hospete<br>50) Kudligi<br>51) Sandur<br>52) Siruguppa |

| Sl. No. | Districts | Taluks |
|---|---|---|
| 9. | Haveri (7 Taluks) | 53) Haveri<br>54) Ranebennur<br>55) Byadagi<br>56) Hirekerur<br>57) Savanur<br>58) Shiggaon<br>59) Hanagal |
| 10. | Bidar (5 Taluks) | 60) Bidar<br>61) Auradh<br>62) Bhalki<br>63) Humnabad<br>64) Basavakalyana |
| 11. | Gadag (5 Taluks) | 65) Gadag<br>66) Mundaragi<br>67) Ron<br>68) Naragund<br>69) Shirahatti |
| 12. | Davagere (6 Taluks) | 70) Davangere<br>71) Harihar<br>72) Harapanahalli<br>73) Honnali<br>74) Jagalur<br>75) Channagiri |
| 13. | Karwar (3 Taluks) | 76) Karwar<br>77) Ankola<br>78) Siddapur |

Therefore, the state Government hereby declares the above taluks of the districts as Flood Affected.

By Order and in the name of the Governor of Karnataka

**M.S. DESAI**

P.R. 2387

Special Officer and Ex- Officio, Deputy Secretary to Government,
Revenue Department (Disaster Management)

**NOTIFICATION**

**No: RD 212 TNR 2009, Bangalore, Dated: 12th October 2009**

Excessive rains and floods in the month of September – October 2009 have caused extensive loss of life, livestock, houses, crops and damages to the infrastructure in the following taluks of the state.

| Sl. No. | Districts | Taluks |
|---|---|---|
| 1. | Chitradurga (6 Taluks) | 1) Chitradurga<br>2) Challakere<br>3) Molakalmuru |

| Sl. No. | Districts | Taluks |
|---|---|---|
| | | 4) Hliriyuru<br>5) Holalkere<br>6) Hosadurga |

Therefore, the state Government hereby declares the above taluks of the districts as Flood Affected.

By Order and in the name of the Governor of Karnataka

**M.S. DESAI**

P.R. 2388

Special Officer and Ex- Officio, Deputy Secretary to Government, Revenue Department (Disaster Management)

**ಕಂದಾಯ ಸಚಿವಾಲಯ**

**ವಿಷಯ:** ಹಾವೇರಿ ಜಿಲ್ಲೆ ಹಾನಗಲ್ ತಾಲ್ಲೂಕು ಮಲ್ಲಿಗಾರ ಗ್ರಾಮದ ಸ. ನಂ. 1 ರಲ್ಲಿ 5.18 ಎಕರೆ ಜಮೀನನ್ನು ರಾಷ್ಟ್ರೋತ್ಥಾನ ಪರಿಷತ್ ಬೆಂಗಳೂರು ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಪ್ರಾದೇಶಿಕ ಆಯುಕ್ತರು ಬೆಳಗಾವಿ ವಿಭಾಗ ಬೆಳಗಾವಿ ರವರ ಪತರ ಸಂಖ್ಯೆ. ಪ್ರಾಆಬೆ/ಭೂಮಿ/v/ ಎಲ್‌ಜಿಎಲ್/ ವಿವ/94/07–08 ದಿನಾಂಕ: 07–2–2009 ಮತ್ತು ದಿನಾಂಕ: 19–06–2009.

**ಪ್ರಸ್ತಾವನೆ:**

ರಾಷ್ಟ್ರೋತ್ಥಾನ ಪರಿಷತ್ ಬೆಂಗಳೂರು ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಹಾವೇರಿ ಜಿಲ್ಲೆ, ಹಾನಗಲ್ ತಾಲ್ಲೂಕು, ಮಲ್ಲಿಗಾರ ಗ್ರಾಮದ ಸ. ನಂ. 1 ರಲ್ಲಿ 5 ಎಕರೆ 18 ಗುಂಟೆ ಜಮೀನನ್ನು ಮಂಜೂರು ಮಾಡಲು ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ ಬೆಳಗಾವಿ ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಮಂಜೂರಾತಿಗಾಗಿ ಪ್ರಸ್ತಾಪಿಸಿರುವ ಮಲ್ಲಿಗಾರ ಗ್ರಾಮದ ಸ.ನಂ. 1 ರಲ್ಲಿನ ಜಮೀನು ಆರ್‌ಟಿಸಿಯ ಕಲಂ 9 ರಲ್ಲಿ ಸರ್ಕಾರ ಎಂಬುದಾಗಿ ವರ್ಗೀಕೃತಗೊಂಡಿದ್ದು 7 ಎಕರೆ 04 ಗುಂಟೆ ಇರುತ್ತದೆ. ಹಾಗೆಯೇ ಆರ್‌ಟಿಸಿಯ ಕಲಂ 11ರಲ್ಲಿ **"TDB ಇದರ ತಾಬಕ್ಕೆ ಕೊಟ್ಟಿದ್ದು 722"** ಎಂಬುದಾಗಿ ದಾಖಲಿಸಿದೆ. ಆಕಾರ್ ಬಂದ್‌ನಲ್ಲಿ ಕೆರೆ ಎಂಬುದಾಗಿ ದಾಖಲಾಗಿರುತ್ತದೆ. ಆಕಾರ್ ಬಂದ್ ಪ್ರತಿ ಪರಿಶೀಲಿಸಲಾಗಿ, ಸದರಿ ಜಮೀನು ಕೆರೆ ಅಂತ ದಾಖಲಿದ್ದು, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಉಪ ವಿಭಾಗ, ಹಾನಗಲ್ ಇವರು ನೀಡಿರುವ ವರದಿಯಲ್ಲಿ, ಸದರಿ ಜಮೀನು ಗುಡ್ಡ ಅಥವಾ ಎತ್ತರ ಪ್ರದೇಶದಲ್ಲಿದ್ದು ಕೆರೆಯ ನೀರು ನಿಲ್ಲುವ ಅಂಗಳದಲ್ಲಿ ಬರುವುದಿಲ್ಲ ಹಾಗೂ ಕೇಳಿರುವ ಸ್ಥಳವು ಈ ಇಲಾಖೆಗೆ ಸಂಬಂಧಿಸಿರುವುದಿಲ್ಲ. ಈ ಸ್ಥಳ ಮಂಜೂರಾತಿಯಿಂದ ನಮ್ಮ ಕೆರೆಗೆ ಭಾದಕವಾಗುವುದಿಲ್ಲ. ಈ ಸ್ಥಳವನ್ನು ಮಂಜೂರು ಮಾಡಲು ಈ ಇಲಾಖೆಯ ಅಭ್ಯಂತರ ಇರುವುದಿಲ್ಲ ಎಂಬುದಾಗಿ ವರದಿ ಮಾಡಿದ್ದಾರೆ.

ಪ್ರಾದೇಶಿಕ ಆಯುಕ್ತರು ಬೆಳಗಾವಿ ವಿಭಾಗ ಬೆಳಗಾವಿ ರವರ ಪತ್ರದಲ್ಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಶವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ: 14:ಎಲ್‌ಜಿಡಿ:2009, ಬೆಂಗಳೂರು, ದಿನಾಂಕ: 12ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಾವೇರಿ ಜಿಲ್ಲೆ, ಹಾನಗಲ್ ತಾಲ್ಲೂಕು, ಮಲ್ಲಿಗಾರ ಗ್ರಾಮದ ಸ.ನಂ.1ರಲ್ಲಿನ 5–18 ಎಕರೆ ಜಮೀನನ್ನು ಕರ್ನಾಟಕ ಭೂಕಂದಾಯ ಕಾಯ್ದೆ 1964 ರ ಕಲಂ 69ನ್ನು ಸಡಿಲಿಸಿ, ನಿಯಮಾನುಸಾರ ಸದರಿ ಜಮೀನಿನ ಮಾರ್ಗಸೂಚಿ ಬೆಲೆಯ ಶೇಕಡ 50 ರಷ್ಟನ್ನು ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ, ರಾಷ್ಟ್ರೋತ್ಥಾನ ಪರಿಷತ್ ಬೆಂಗಳೂರು ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಮಂಜೂರು ಮಾಡಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ:881:ವೆಚ್ಚ–7/2009 ದಿನಾಂಕ: 9–9–2009 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯ ಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2389

**ಎಂ.ಕೆ. ನರಸಿಂಹಲು**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಮಂಜೂರಾತಿ–3)

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಬೌಗೋಳಿಕ ಮಾಹಿತಿ ಪದ್ಧತಿ ಕೋಶ ಪ್ರಾರಂಭಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 30 ಆಡವಿ 2009 ದಿನಾಂಕ :12–05–09

2. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 41 ಆಡವಿ 2009 ದಿನಾಂಕ: 6–6–09

3. ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 41 ಆಡವಿ 2009 ದಿನಾಂಕ: 14–7–09

4. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 41 ಆಡವಿ 2009 ದಿನಾಂಕ : 24–09–09

5. ನಿರ್ದೇಶಕರು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರರವರ ಪತ್ರ ಸಂ: ಕರಾದೂಸಂಅಕೇಂ/74/ಜಿಇಎನ್/2009, ದಿನಾಂಕ: 6–10–2009

**ಪ್ರಸ್ತಾವನೆ:**

2009–10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ **"3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು (ಯೋಜನೆ)"** ರಡಿಯಲ್ಲಿ ರೂ. 680.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ಒದಗಿಸಲಾಗಿರುವ ರೂ. 150.00 ಲಕ್ಷಗಳಲ್ಲಿ ಮೊದಲನೆಯ ಕಂತಿನ ಅನುದಾನವಾಗಿ ರೂ. 37.50 ಲಕ್ಷಗಳ ಅನುದಾನವನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಬಿಡುಗಡೆ ಮಾಡಲಾಗಿದೆ. ಮೇಲೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 37.50 ಲಕ್ಷಗಳ ಹಾಗೂ ಕೇಂದ್ರದ ವತಿಯಿಂದ ನಡೆಸಲು ಉದ್ದೇಶಿಸಲಾಗಿರುವ ಸಮ್ಮೇಳನ, ಸಂಕೀರ್ಣ ಮತ್ತು ಕಾರ್ಯಗಾರಗಳಿಗೆ ಉಪಯೋಗಿಸಲು ರೂ. 15.00 ಲಕ್ಷಗಳನ್ನು ಅಂದರೆ ಒಟ್ಟು ರೂ. 52.50 ಲಕ್ಷಗಳನ್ನು 2ನೇ ತ್ರೈಮಾಸಿಕ ಕಂತಿನ ಅನುದಾನವಾಗಿ ಬಿಡುಗಡೆ ಮಾಡಲಾಗಿದೆ.

ಮೇಲೆ (4) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಒದಗಿಸಲಾದ ರೂ. 680.00 ಲಕ್ಷಗಳ ಅನುದಾನದಲ್ಲಿ ಭೌಗೋಳಿಕ ಮಾಹಿತಿ ಪದ್ದತಿ ಯೋಜನೆಯ ಅನುಷ್ಠಾನಕ್ಕಾಗಿ ನಿಗದಿಪಡಿಸಲಾಗಿರುವ ರೂ. 45.00 ಲಕ್ಷಗಳ ಅನುದಾನದ ಪೈಕಿ ರೂ. 25.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ (5) ರಲ್ಲಿ ಓದಲಾದ ನಿರ್ದೇಶಕರ ಪತ್ರದಲ್ಲಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ರೂ. 680.00 ಲಕ್ಷಗಳಲ್ಲಿ ರೂ. 150.00 ಲಕ್ಷಗಳನ್ನು ಆಡಳಿತಾತ್ಮಕ ವೆಚ್ಚಕ್ಕಾಗಿ ನಿಗದಿಪಡಿಸಲಾಗಿದ್ದು, ಅದರಲ್ಲಿ ಇಲ್ಲಿಯವರೆವಿಗೆ 2 ಕಂತುಗಳಲ್ಲಿ ರೂ. ಒಟ್ಟು 75.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು ಈಗ ಕೇಂದ್ರದ ಸಿಬ್ಬಂದಿಗಳ ವೇತನ ಮತ್ತು ಇತರ ವೆಚ್ಚಕ್ಕಾಗಿ ಹಣದ ಅವಶ್ಯಕತೆ ಇರುವುದರಿಂದ 3ನೇ ಕಂತಿನ ಅನುದಾನವಾಗಿ ರೂ 37.50 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಒದಗಿಸಲಾದ ರೂ. 680.00 ಲಕ್ಷಗಳಲ್ಲಿ ಆಡಳಿತಾತ್ಮಕ ವೆಚ್ಚಕ್ಕಾಗಿ ನಿಗದಿಪಡಿಸಲಾಗಿರುವ ರೂ. 150.00 ಲಕ್ಷಗಳ ಅನುದಾನದ ಪೈಕಿ ಸದರಿ ಕೇಂದ್ರಕ್ಕೆ 3ನೇ ತ್ರೈಮಾಸಿಕ ಕಂತಾಗಿ ರೂ. 37.50 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 41 ಎಡಿಎಂ 2009, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಒದಗಿಸಲಾದ ರೂ. 680.00 ಲಕ್ಷಗಳ ಅನುದಾನದಲ್ಲಿ ಆಡಳಿತಾತ್ಮಕ ವೆಚ್ಚಕ್ಕಾಗಿ ನಿಗದಿಪಡಿಸಲಾಗಿರುವ ರೂ. 150.00 ಲಕ್ಷಗಳ ಅನುದಾನದ ಪೈಕಿ 3ನೇ ತ್ರೈಮಾಸಿಕ ಕಂತಾಗಿ ರೂ. 37.50 ಲಕ್ಷಗಳ ಅನುದಾನವನ್ನು (ಮೂವತ್ತೇಳು ಲಕ್ಷ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಸದರಿ ಕೇಂದ್ರಕ್ಕೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು (ಯೋಜನೆ)"** ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಇವರು ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರವನ್ನು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1ಟಿಎಫ್‌ಪಿ 2008, ದಿನಾಂಕ 16–5–08 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 2390 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ರಾಜ್ಯದಲ್ಲಿ ಸಂಭವಿಸಿರುವ ಪ್ರಕೃತಿ ವಿಕೋಪ ಪರಿಹಾರಕ್ಕಾಗಿ ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳು 10 ದಿನಗಳ ಸಂಬಳವನ್ನು ದೇಣಿಗೆಯಾಗಿ ನೀಡುತ್ತಿರುವ ಬಗ್ಗೆ.

**ಓದಲಾಗಿದೆ:** 1. ಅಧ್ಯಕ್ಷರು, ಕರ್ನಾಟಕ ಆಡಳಿತ ಸೇವೆ ಅಧಿಕಾರಿಗಳ ಸಂಘ (ರಿ), ಬೆಂಗಳೂರು ಇವರ ಮನವಿ ದಿನಾಂಕ: 8–10–09

2. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 23 ಟಿಎಆರ್09 ದಿನಾಂಕ: 29–09–2009

3. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 16 ಎಸ್ ಆರ್‌ಪಿ 09 ದಿನಾಂಕ: 9–10–09

**ಪ್ರಸ್ತಾವನೆ:**

ರಾಜ್ಯದಲ್ಲಿ ಪ್ರಕೃತಿ ವಿಕೋಪದಿಂದ ಸಂಭವಿಸಿರುವ ಅಪಾರ ಜೀವಹಾನಿ ಮತ್ತು ಮನೆಮಾರುಗಳ ನಾಶವನ್ನು ಮನಗಂಡು ಸಂತ್ರಸ್ತರಿಗೆ ಪರಿಹಾರವನ್ನು ಕಲ್ಪಿಸುವುದಕ್ಕಾಗಿ ಮೇಲೆ ಓದಲಾದ ಕ್ರಮಾಂಕ:1 ರ ದಿನಾಂಕ:8–10–09 ರಲ್ಲಿ ಅಧ್ಯಕ್ಷರು ಕರ್ನಾಟಕ ಆಡಳಿತ ಸೇವೆ ಅಧಿಕಾರಿಗಳ ಸಂಘ (ರಿ), ಬೆಂಗಳೂರು ಇವರು ಮನವಿ ಸಲ್ಲಿಸಿ ಕರ್ನಾಟಕ ಆಡಳಿತ ಸೇವೆಗೆ ಸೇರಿದ ಎಲ್ಲಾ ಅಧಿಕಾರಿಗಳು ತಮ್ಮ 10 ದಿನಗಳ ಸಂಬಳವನ್ನು ದೇಣಿಗೆಯಾಗಿ ನೀಡಲು ಒಪ್ಪಿರುತ್ತಾರೆಂದು ಅಕ್ಟೋಬರ್–09 ಮಾಹೆಯಿಂದ ಫೆಬ್ರವರಿ 10 ಮಾಹೆಯವರೆಗೆ 5 ತಿಂಗಳ ಸಂಬಳದಲ್ಲಿ ಪ್ರತಿ ತಿಂಗಳು 2 ದಿನಗಳ ಸಂಬಳವನ್ನು, ಅವರುಗಳ ಸಂಬಳದಿಂದ ಕಡಿತಗೊಳಿಸಿ, ಸರ್ಕಾರದ ವತಿಯಿಂದಲೇ ಮುಖ್ಯಮಂತ್ರಿಯವರ ಪರಿಹಾರ ನಿಧಿಗೆ ಸ್ವೀಕರಿಸಲು ಸೂಕ್ತ ಸರ್ಕಾರಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಮೇಲೆ ಓದಲಾದ ಕ್ರಮಾಂಕ: 2ರ ದಿನಾಂಕ: 29–09–09ರ ಸರ್ಕಾರಿ ಆದೇಶದಲ್ಲಿ ಸಾರ್ವಜನಿಕರಿಂದ ದೇಣಿಗೆಯಾಗಿ ನೀಡುವ ಪರಿಹಾರದ ನಿರ್ವಹಣೆಯನ್ನು ಯಾವ ರೀತಿಯಲ್ಲಿ ನಿರ್ವಹಿಸಬೇಕೆಂಬುದನ್ನು ತಿಳಿಸಲಾಗಿದೆ. ಮೇಲೆ ಓದಲಾದ ಕ್ರಮಾಂಕ: 3ರ ದಿನಾಂಕ:9–10–09ರ ಸರ್ಕಾರಿ ಆದೇಶದಲ್ಲಿ ರಾಜ್ಯ ಸರ್ಕಾರಿ ನೌಕರರಿಂದ ಒಂದು ದಿನದ ಸಂಬಳ ಕೊಡುಗೆಯನ್ನು ಸ್ವೀಕರಿಸುವ ಸಂಬಂಧ ವಿವರವಾಗಿ ಅನುಸರಿಸಬೇಕಾದ ಮಾರ್ಗಸೂಚಿ ನೀಡಲಾಗಿದೆ.

ಮೇಲೆ ವಿವರಿಸಿದ ಸಂದರ್ಭದಲ್ಲಿ ಸರ್ಕಾರವು ಕರ್ನಾಟಕ ಆಡಳಿತ ಸೇವೆ ಅಧಿಕಾರಿಗಳ ಸಂಘದ ಕೊಡುಗೆಯನ್ನು ಶ್ಲಾಘಿಸುತ್ತಾ, ಅವರು ಒಪ್ಪಿದಂತೆ ದೇಣಿಗೆ ಹಣವನ್ನು ಸ್ವೀಕರಿಸುವ ಸಂಬಂಧದಲ್ಲಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 448 ಆಸೇಇ 2009, ಬೆಂಗಳೂರು ದಿನಾಂಕ: 15ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣದಿಂದಾಗಿ, ಸರ್ಕಾರಿ ಆದೇಶ ದಿನಾಂಕ:29–09–09 ಹಾಗೂ ದಿನಾಂಕ:09–10–09 ರಲ್ಲಿ ಸೂಚಿಸಿರುವ ಮಾರ್ಗಸೂಚಿಯಂತೆ ಕರ್ನಾಟಕ ಆಡಳಿತ ಸೇವೆಗೆ ಸೇರಿದ ಎಲ್ಲಾ ಅಧಿಕಾರಿಗಳ ಅಕ್ಟೋಬರ್–9 ಮಾಹೆಯಿಂದ ಫೆಬ್ರವರಿ–2010ರ ಮಾಹೆಯವರೆಗೆ 5 ತಿಂಗಳ ಸಂಬಳದಲ್ಲಿ ಪ್ರತಿ ತಿಂಗಳು 2 ದಿನಗಳ ಸಂಬಳವನ್ನು ಹೀಗೆ ಒಟ್ಟು 10 ದಿನಗಳ ಸಂಬಳವನ್ನು ಕರ್ನಾಟಕ ಪ್ರಕೃತಿ ವಿಕೋಪ ಪರಿಹಾರ ನಿಧಿಗೆ ಅವರುಗಳ ಸಂಬಳದಿಂದ ಕಠಾಯಿಸಿ ಸಂದಾಯಿಸಲು ಆದೇಶಿಸಿದೆ.

ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳ ಸಂಘವು 10 ದಿನಗಳ ಸಂಬಳವನ್ನು ಪರಿಹಾರ ನಿಧಿಗೆ ನೀಡಲು ಒಪ್ಪಿರುವುದರಿಂದ, ಇವರುಗಳಿಗೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 16 ಎಸ್‌ಆರ್‌ಪಿ 2009 ದಿನಾಂಕ:9–10–09 ರ ಪ್ರಕಾರ ಒಂದು ದಿನದ ಸಂಬಳವನ್ನು ದೇಣಿಗೆಯಾಗಿ ನೀಡುವುದು ಅನ್ವಯವಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**

ಪಿ.ಆರ್. 2394 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

**ವಿಷಯ:** ಶ್ರೀ ಬಿ. ನಾಗರಾಜ್, ನಿವೃತ್ತ ಕೆಎಎಸ್ ಅಧಿಕಾರಿ ಶ್ರೀ ಪಿ. ರಾಮಪ್ಪ, ನಿವೃತ್ತ ಶಿರಸ್ತೇದಾರ್, ಶ್ರೀ ಸಿ. ಕೃಷ್ಣಪ್ಪ ಪ್ರಥಮ ದರ್ಜೆ ಸಹಾಯಕ ಮತ್ತು ಶ್ರೀ ಓ. ರಾಮಕೃಷ್ಣ ಪ್ರಥಮ ದರ್ಜೆ ಸಹಾಯಕ ಇವರುಗಳ ವಿರುದ್ಧ ಜಂಟೀ ಇಲಾಖಾ ವಿಚಾರಣೆ – ಅಂತಿಮ ಆದೇಶ.

**ಓದಲಾಗಿದೆ:** 1. ದಿನಾಂಕ:10–02–06 ರ ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 048 ಎಸ್ಇ ಎನ್ 03

2. ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ಸಂಖ್ಯೆ: ಜಿಪಂಶಿ/ಮುಕಾನಿಅ/ಅಶಾ/ವಿವ1/2005–06 ದಿನಾಂಕ:11–07–07.

3. ದಿನಾಂಕ 30–10–07ರ ನೋಟೀಸು ಸಂಖ್ಯೆ: ಸಿಆಸುಇ 088 ಕೆಇವಿ 07.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿ, ತುಂಗ ಮೇಲ್ದಂಡೆ ಯೋಜನೆ ಶಿವಮೊಗ್ಗ ಇಲ್ಲಿ ಶ್ರೀ ಬಿ. ನಾಗರಾಜ್ ನಿವೃತ್ತ ಕೆಎಎಸ್ ಅಧಿಕಾರಿ ಇವರು ವಿಶೇಷ ಭೂ ಸ್ವಾಧೀನಾಧಿಕಾರಿ ಹುದ್ದೆಯಲ್ಲಿ ಶ್ರೀ ಪಿ. ರಾಮಪ್ಪ ನಿವೃತ್ತ ಶಿರಸ್ತೇದಾರ್ ಇವರು ವ್ಯವಸ್ಥಾಪಕ ಹುದ್ದೆಯಲ್ಲಿ ಶ್ರೀ ಸಿ. ಕೃಷ್ಣಪ್ಪ ಮತ್ತು ಶ್ರೀ ಓ. ರಾಮಕೃಷ್ಣ ರವರುಗಳು ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ತುಂಗ ಮೇಲ್ದಂಡೆ ಯೋಜನೆಗಾಗಿ ಶಿವಮೊಗ್ಗ ತಾಲ್ಲೂಕು ಅನುಪಿನಕಟ್ಟೆ ಗ್ರಾಮದ ಸರ್ವೆ ನಂ 30, 32/2. 34.73/1, 73/2, 74 ಗಳನ್ನು ಸ್ವಾಧೀನಪಡಿಸಿಕೊಂಡಿದ್ದು ಈ ಜಮೀನುಗಳಿಗೆ ಭೂ ಪರಿಹಾರ ಮೊತ್ತ ರೂ. 814520–00 ಗಳನ್ನು ಪಾವತಿಸುವಲ್ಲಿ ಸರ್ಕಾರದ ಹಣಕಾಸು ನಿಯಮಾವಳಿಗಳನ್ನು ಮತ್ತು ವಿಧಾನವನ್ನು ಉಲ್ಲಂಘಿಸುವ ಮೂಲಕ ದುರ್ನಡತೆ ಎಸಗಿರುವ ಆರೋಪದಲ್ಲಿನ ಸತ್ಯಾಸತ್ಯತೆಯ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ ಶಿವಮೊಗ್ಗ, ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೇಂದ್ರ ಸ್ಥಾನಿಕ ಸಹಾಯಕರು ಜಿಲ್ಲಾಧಿಕಾರಿಗಳ ಕಛೇರಿ ಶಿವಮೊಗ್ಗ ರವರನ್ನು ಶಿಸ್ತು ಪ್ರಾಧಿಕಾರಿಯ ಪರವಾಗಿ ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ವಿಚಾರಣಾಧಿಕಾರಿಗಳು ಶ್ರೀ ಬಿ. ನಾಗರಾಜ್, ನಿವೃತ್ತ ಕೆಎಎಸ್ ಅಧಿಕಾರಿಯ ವಿರುದ್ಧದ ಆರೋಪಗಳ ಪೈಕಿ ಒಂದು ಆರೋಪವು ಭಾಗಶಃ ರುಜುವಾತಾಗಿರುತ್ತದೆ ಎಂದು ಉಳಿದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ. ಶ್ರೀ ಪಿ. ರಾಮಪ್ಪ ನಿವೃತ್ತ ಶಿರಸ್ತೇದಾರ್ ರವರ ವಿರುದ್ಧದ ಅರೋಪಗಳ ಪೈಕಿ ಒಂದು ಆರೋಪವು ರುಜುವಾತಾಗಿರುತ್ತದೆ ಎಂದು ಉಳಿದ ಆರೋಪವು ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ. ಶ್ರೀ ಕೃಷ್ಣಪ್ಪ ಮತ್ತು ಶ್ರೀ ರಾಮಕೃಷ್ಣ ಪ್ರಥಮ ದರ್ಜೆ ಸಹಾಯಕರು ಇವರುಗಳ ವಿರುದ್ಧದ ಆರೋಪಗಳು ಸಾಭೀತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ.

ವಿಚಾರಣಾ ವರದಿಯನ್ನು ಪರಿಶೀಲಿಸಿ ಸರ್ಕಾರವು ಅಂಗೀಕರಿಸುತ್ತಾ, ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ವಿಚಾರಣಾ ವರದಿಯ ಪ್ರತಿಯನ್ನು ಲಗತ್ತಿಸುತ್ತಾ, ವರದಿಯ ಬಗ್ಗೆ ತಮ್ಮ ಅಹವಾಲು ಏನಾದರೂ ಇದ್ದಲ್ಲಿ ಅದನ್ನು ಲಿಖಿತವಾಗಿ ಸಲ್ಲಿಸುವಂತೆ ಶ್ರೀ ಬಿ. ನಾಗರಾಜ್ ಮತ್ತು ಶ್ರೀ ವಿ. ರಾಮಪ್ಪ ರವರುಗಳಿಗೆ ಜಾರಿಗೊಳಿಸಲಾದ ನೋಟೀಸಿಗೆ ಇವರುಗಳು ಸಲ್ಲಿಸಿದ ಲಿಖಿತ ಅಹವಾಲನ್ನು ಸರ್ಕಾರವು ಪರಿಗಣಿಸುತ್ತಾ ಆಪಾದಿತರ ಪೈಕಿ ಇಬ್ಬರ ವಿರುದ್ಧದ ಆರೋಪಗಳು ಸಾಬೀತಾಗಿಲ್ಲದಿರುವುದು ಒಬ್ಬರ ವಿರುದ್ಧದ ಒಂದು ಆರೋಪವು ಭಾಗಶಃ ಸಾಬೀತಾಗಿರುವುದು ಮತ್ತು ಮತ್ತೊಬ್ಬರ ವಿರುದ್ಧದ ಒಂದು ಆರೋಪವು ಮಾತ್ರ ಸಾಬೀತಾಗಿರುವ ಅಂಶಗಳನ್ನು ಪರಿಗಣಿಸುತ್ತಾ ಪ್ರಕರಣ ನಡೆದು ಹಲವಾರು ವರ್ಷಗಳಾಗಿದ್ದು. ಪ್ರಕರಣವನ್ನು ಮುಂದುವರಿಸಿದಲ್ಲಿ ಬರುವ ಫಲಿತಾಂಶವು ಯಾವುದೇ ಧನಾತ್ಮಕ ಅಂಶವನ್ನು ಒಳಗೊಂಡಿರುವುದಿಲ್ಲ. ಎಂಬುದನ್ನು ಮನಗಂಡು ಹಾಗೂ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಆಗಿಲ್ಲದಿರುವುದರಿಂದ, ಇವರುಗಳ ವಿರುದ್ಧ ಶಿಸ್ತು ಕ್ರಮವನ್ನು ಕೈಬಿಡಲು ಸರ್ಕಾರವು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 088 ಕೆಇವಿ 07, ಬೆಂಗಳೂರು, ದಿನಾಂಕ: 13ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿ ಶಿವಮೊಗ್ಗ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅಂದಿನ (1) ವಿಶೇಷ ಭೂ ಸ್ವಾಧೀನಾಧಿಕಾರಿ ಶ್ರೀ ಬಿ. ನಾಗರಾಜ್ ನಿವೃತ್ತ ಕೆಎಎಸ್ ಅಧಿಕಾರಿ (2) ವ್ಯವಸ್ಥಾಪಕ ಶ್ರೀ ವಿ. ರಾಮಪ್ಪ, ನಿವೃತ್ತ ಶಿರಸ್ತೇದಾರ್, (3) ಪ್ರಥಮ ದರ್ಜೆ ಸಹಾಯಕ ಶ್ರೀ ಸಿ. ಕೃಷ್ಣಪ್ಪ ಮತ್ತು (4) ಪ್ರಥಮ ದರ್ಜೆ ಸಹಾಯಕ ಶ್ರೀ ಓ. ರಾಮಕೃಷ್ಣ ಇವರುಗಳನ್ನು ಪ್ರಸ್ತಾವನೆಯಲ್ಲಿ ವಿವರಿಸಿದ ಆರೋಪಗಳಿಂದ ದೋಷ ಮುಕ್ತಗೊಳಿಸಿ ಆದೇಶಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀಯುತರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**

ಪಿ.ಆರ್. 2395

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಒಳಾಡಳಿತ ಮತ್ತು ಸಾರಿಗೆ ಇಲಾಖೆಯಲ್ಲಿ ಒಂದು ಉಪ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 84 ಸಸಿವಿ 2004, ದಿನಾಂಕ: 26–09–2005.

2. ಒಳಾಡಳಿತ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಒಇ 20 ಪಿಸಿಎಸ್ 2009, ದಿನಾಂಕ:24.08.2009

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಒಳಾಡಳಿತ ಇಲಾಖೆಯಲ್ಲಿ ವೇತನ ಶ್ರೇಣಿ ರೂ. 13820–17720ರ ಅಪರ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲಾಗಿದೆ ಹಾಗೂ ಈ ಹುದ್ದೆಯನ್ನು ನ್ಯಾಯಾಂಗ ಇಲಾಖೆಯಲ್ಲಿ ಸೇರಿದ ಅದೇ ಹಂತದ ಅಧಿಕಾರಿಯನ್ನು ನಿಯೋಜನೆ ಮೇಲೆ ಭರ್ತಿ ಮಾಡಲು ಆದೇಶಿಸಲಾಗಿದೆ.

ಆದರೆ ಈ ಹುದ್ದೆಗೆ ನ್ಯಾಯಾಂಗ ಇಲಾಖೆಯ ಅಧಿಕಾರಿಗಳನ್ನು ಉಚ್ಚ ನ್ಯಾಯಾಲಯವು ನೇಮಿಸಿಲ್ಲವಾದ್ದರಿಂದ, ಉಲ್ಲೇಖ–2ರ ಅನಧಿಕೃತ ಟಿಪ್ಪಣಿಯಲ್ಲಿ ಒಳಾಡಳಿತ ಇಲಾಖೆಯು ಐಎಎಸ್/ಕೆಎಎಸ್/ಸಚಿವಾಲಯ ಸೇವೆಯ ಅಧಿಕಾರಿಗಳಿಂದ ತುಂಬಲು ಒಳಾಡಳಿತ ಇಲಾಖೆಯು ಕೋರಿದೆ. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 83 ಸಸಿವಿ 2005, ಬೆಂಗಳೂರು, ದಿನಾಂಕ: 13ನೇ ಅಕ್ಟೋಬರ್ 2009**

ಕರ್ನಾಟಕ ಸರ್ಕಾರ ಸಚಿವಾಲಯದ ಒಳಾಡಳಿತ ಮತ್ತು ಸಾರಿಗೆ ಇಲಾಖೆಯಲ್ಲಿನ ಆದೇಶ ಸಂಖ್ಯೆ: ಸಿಆಸುಇ 84 ಸಸಿವಿ 2004, ದಿನಾಂಕ: 26–09–2005 ರ ಆದೇಶದಲ್ಲಿ ಸೃಜಿಸಲಾದ ಅಪರ ಕಾರ್ಯದರ್ಶಿ ಹುದ್ದೆಯನ್ನು ನಿಮ್ನೀಕರಿಸಿ (Down Grade) ಸರ್ಕಾರದ ಉಪ ಕಾರ್ಯದರ್ಶಿ ಎಂದು ಮರುಪದನಾಮೀಕರಿಸಲಾಗಿದೆ.

ಈ ಹುದ್ದೆಯನ್ನು ಐಎಎಸ್/ಕೆಎಎಸ್/ಸಚಿವಾಲಯ ಅಧಿಕಾರಿಗಳಿಂದ ಭರ್ತಿ ಮಾಡಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/1/ಟಿಎಫ್‌ಪಿ 1996, ದಿನಾಂಕ: 10–07–1996ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಪಿ.ಆರ್. 2396

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3).

**FOREST, ECOLOGY AND ENVIRONMENT SECRETARIAT**

**ADDENDUM**

**No: FEE 87 FFM 2006, Bangalore, Dated: 14th October 2009**

In Government Order No.FEE 87 FFM 2006, dated:06.08.2009, the following shall be inserted, wherever the word 16.26 ha. occurred:-

"diversion of 20.23 ha. of forest land (16.26 ha. of already broken up area and 3.97 ha. to be broken up area)."

Further, it is directed to take note of the decision of the Hon'ble Supreme Court order in the SLP ©Nos. 22943-22952/2009.

By Order and in the name of the Governor of Karnataka

**H.M. MALLIKARJUNASWAMY**

P.R. 2397

Under Secretary to Government,

Forest, Ecology and Environment Department

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಶಿವಲಿಂಗಪ್ಪ ಪಟ್ಟಣ, ಆರ್.ಎಸ್.ಐ, ಡಿ.ಎ.ಆರ್, ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಜಿಲ್ಲೆ, ಇವರ ಆದೇಶ ಸಂಖ್ಯೆ: ಪಿಆರ್:21/2009 ಡಿಓಬಿ ಸಂ: 129/2009 ದಿ:11–02–2009

2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಅಪೀಲು/10/ಈವ/2009 ಅ.ಪು.ಸಂ:203/ಈವ/09 ದಿನಾಂಕ: 16–03–2009
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:26–03–09
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)6/2009–10 ದಿನಾಂಕ: 20–06–2009

**ಪ್ರಸ್ತಾವನೆ:**

ಶ್ರೀ ಶಿವಲಿಂಗಪ್ಪ ಪಟ್ಟಣ, ಆರ್.ಎಸ್.ಐ ಜಿಲ್ಲಾ ಸಶಸ್ತ್ರ ಪಡೆ, ಗುಲ್ಬರ್ಗಾ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅನಧಿಕೃತವಾಗಿ ಗೈರು ಹಾಜರಾಗಿ ದುರ್ನಡತೆ ಹಾಗೂ ಕರ್ತವ್ಯಲೋಪವೆಸಗಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಾಮವಳಿ 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

"For your gross misconduct & dereliction of duties in overstaying the leave period and remaining unauthorizedly absent for duties up to 30.12.08"

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಸಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧಿಕ್ಷಕರು, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:11–02–2009ರ ಆದೇಶದಲ್ಲಿ "ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಒಂದು ತಿಂಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ ಮುಂದೂಡುವ ದಂಡನೆಯನ್ನು ವಿಧಿಸಿ, ಗೈರು ಹಾಜರಾದ ಅವಧಿ ದಿನಾಂಕ:12–12–2008 ರಿಂದ 26–12–2008ನ್ನು ವೇತನ ರಹಿತ ರಜೆಯೆಂದು ದಿನಾಂಕ:22–01–2009ರಿಂದ 05–02–2009ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ."

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ:16–03–2009ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 86 ಪೊಸಿಅ 2009, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಿವಲಿಂಗಪ್ಪ ಪಟ್ಟಣ, ಆರ್.ಎಸ್.ಐ. ಜಿಲ್ಲಾ ಸಶಸ್ತ್ರ ಪಡೆ, ಗುಲ್ಬರ್ಗಾ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2398

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಜಗದೀಶ್ ಹಂಚನಾಳ, ಪಿ.ಎಸ್.ಐ ಮುದೋಳ ಪೊಲೀಸ್ ಠಾಣೆ, ಗುಲ್ಬರ್ಗಾ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧಿಕ್ಷಕರು, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಪಿಆರ್:177/2008 ಡಿಓಬಿ ಸಂ: 718/2008: ದಿ:15–10–08
2. ಮೇಲ್ಮನವಿ, ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಅಪೀಲು 2/ಈವ/2008 ಆ.ಪು.ಸಂ:200/ಈವ/09 ದಿನಾಂಕ:16–03–2009

3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:10–05–09
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)21/2009–10 ದಿನಾಂಕ: 21–08–2009

**ಪ್ರಸ್ತಾವನೆ:**

ಶ್ರೀ ಜಗದೀಶ್ ಹಂಚನಾಳ, ಪಿ.ಎಸ್.ಐ. ಮುದೋಳ ಪೊಲೀಸ್ ಠಾಣೆ, ಇವರು ವಾಡಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕಾರ್ಯ ವಿಮುಖತೆ ಹಾಗೂ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಾಮವಳಿ 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

"ಮಟಕಾ/ಇಸ್ಪೇಟ ಜೂಜಾಟ ನಡೆಯದಂತೆ ತಡೆಯಲು ವಿಫಲರಾಗಿ ಕಾರ್ಯ ವಿಮುಖತೆ ಹಾಗೂ ದುರ್ನಡತೆ ಪ್ರದರ್ಶಿಸಿದರ ಬಗ್ಗೆ"

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧಿಕ್ಷಕರು, ಗುಲ್ಬರ್ಗಾ ಇವರು ಮೇಲೆ ಕ್ರಮಸಂಖ್ಯೆ(1) ರಲ್ಲಿ ಓದಲಾದ ದಿನಾಂಕ: 15–10–08ರ ಆದೇಶದಲ್ಲಿ "ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಎರಡು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ".

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲ್ಮನವಿಯನ್ನು ಭಾಗಶ: ಪುರಸ್ಕರಿಸಿ ಇವರ ಒಂದು ವಾರ್ಷಿರ್ಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ಮೇಲೆ ಕ್ರಮಸಂಖ್ಯೆ: (2)ರಲ್ಲಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 109 ಪೊಸಿಅ 2009 ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಗದೀಶ್ ಹಂಚಿನಾಳ, ಪಿ.ಎಸ್.ಐ. ಮುದೋಳ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2399

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಕಂದಾಯ ಸಚಿವಾಲಯ

**ವಿಷಯ:** 2009–10ನೇ ಸಾಲಿನ ಸೆಪ್ಟಂಬರ್ ಹಾಗೂ ಅಕ್ಟೋಬರ್ ತಿಂಗಳಲ್ಲಿ ಸುರಿದ ಭಾರಿ ಮಳೆ ಹಾಗೂ ಪ್ರವಾಹದ ವಿಕೋಪಗಳಿಂದ ಆಗಿರುವ ಹಾನಿಗಳಿಗೆ ತುರ್ತು ಪರಿಹಾರ ಕ್ರಮ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಪ್ರಸ್ತಾವನೆ:**

2009ನೇ ಸಾಲಿನ ಸೆಪ್ಟೆಂಬರ್ ತಿಂಗಳ ಅಂತ್ಯದಲ್ಲಿ ಹಾಗೂ ಅಕ್ಟೋಬರ್ ತಿಂಗಳ ಮೊದಲವಾರದಲ್ಲಿ ಬಾಗಲಕೋಟೆ, ಬಿಜಾಪುರ, ಗದಗ, ರಾಯಚೂರು, ಕೊಪ್ಪಳ, ಬಳ್ಳಾರಿ, ಗುಲ್ಬರ್ಗಾ, ಧಾರವಾಡ, ಬೀದರ್, ಹಾವೇರಿ, ಬೆಳಗಾಂ ಹಾಗೂ ಚಿತ್ರದುರ್ಗ ಪ್ರವಾಹ ಹಾನಿ ಪರಿಹಾರ ಹಾಗೂ ಮೂಲಭೂತ ಸೌಕರ್ಯಗಳ ತುರ್ತು ರಿಪೇರಿಗಾಗಿ ಇದೇ ಸಮಸಂಖ್ಯೆಯ ದಿನಾಂಕ: 3.10.2009 ರಂದು 10,500,00 ಲಕ್ಷ ರೂಪಾಯಿಗಳನ್ನು ಬಿಡುಗಡೆ ಮಾಡಲಾಗಿದೆ. ಪ್ರಕೃತಿ ವಿಕೋಪದ ಭೀಕರತೆಯನ್ನು ಪರಿಗಣಿಸಿ ಪ್ರವಾಹ ಪೀಡಿತ ಜಿಲ್ಲೆಗಳಿಗೆ ಇನ್ನೂ 10000.00 ಲಕ್ಷ ರೂಪಾಯಿಗಳನ್ನು ತುರ್ತಾಗಿ ಬಿಡುಗಡೆ ಮಾಡಲು ತೀಮಾನಿಸಿ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 137 ಟಿಎನ್‌ಆರ್ 2009 (2), ಬೆಂಗಳೂರು, ದಿನಾಂಕ: 3ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯ ಕೈಗೊಳ್ಳಲು ಈ ಕೆಳಕಂಡಂತೆ ಜಿಲ್ಲಾಧಿಕಾರಿಗಳಿಗೆ ರೂ 10000.00 ಲಕ್ಷಗಳನ್ನು ಬಿಡುಗಡೆ ಮಾಡಿದೆ.

| ಕ್ರ. ಸಂ. | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|
| 1 | ಬಾಗಲಕೋಟೆ | 1000.00 |
| 2 | ಬಿಜಾಪುರ | 1000.00 |
| 3 | ಬಳ್ಳಾರಿ | 1000.00 |
| 4 | ರಾಯಚೂರು | 1000.00 |
| 5 | ಗದಗ | 700.00 |
| 6 | ಕೊಪ್ಪಳ | 700.00 |
| 7 | ಗುಲ್ಬರ್ಗಾ | 700.00 |
| 8 | ಬೀದರ್ | 500.00 |
| 9 | ಹಾವೇರಿ | 500.00 |
| 10 | ಧಾರವಾಡ | 500.00 |
| 11 | ದಾವಣಗೆರೆ | 500.00 |
| 12 | ಬೆಳಗಾಂ | 500.00 |
| 13 | ದಕ್ಷಿಣ ಕನ್ನಡ | 500.00 |
| 14 | ಉತ್ತರ ಕನ್ನಡ | 500.00 |
| 15 | ಉಡುಪಿ | 400.00 |
| | **ಒಟ್ಟು** | **10000.00** |

**(ಒಟ್ಟು ರೂ. ಹತ್ತು ಸಾವಿರ ಲಕ್ಷಗಳು ಮಾತ್ರ)**

2. ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಈ ಕೆಳಕಂಡಂತೆ ಆದ್ಯತೆಯ ಮೇರೆಗೆ ಉಪಯೋಗಿಸುವುದು.

ಅ. ಮಾನವ/ಪ್ರಾಣಿ ಜೀವಹಾನಿ

ಆ. ಮನೆ ಹಾನಿ

ಇ. ಬೆಳೆ ಹಾನಿ

ಈ. ಹಾನಿಗೊಳಗಾದ ಮೂಲಭೂತ ಸೌಕರ್ಯಗಳಿಗೆ ತುರ್ತು ರಿಪೇರಿ

ಉ. ಕುಡಿಯುವ ನೀರಿನ ಸಮಸ್ಯೆ

ಊ. ಸಾಂಕ್ರಾಮಿಕ ರೋಗ ತಡೆಗಟ್ಟಲು ಹಾಗೂ ನೈರ್ಮಲ್ಯೀಕರಣಕ್ಕೆ

ಋ. ಜಾನುವಾರುಗಳ ಸಂರಕ್ಷಣೆ

3. ಕೇಂದ್ರ ಸರ್ಕಾರವು ಹೊರಡಿಸಿರುವ ಸಿಆರ್‌ಎಫ್/ಎನ್‌ಸಿಸಿಎಫ್ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು.

4. ಅನುದಾನದ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಸಿಆರ್‌ಎಫ್/ಎನ್‌ಸಿಸಿಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

5. ಪ್ರಕೃತಿ ವಿಕೋಪದಿಂದ ಅದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್. ಪಿ.ಡಿ.ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–02–110–0–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 90 ಬಿಎಸ್‌ಆರ್ 2009 ದಿನಾಂಕ: 3.10.2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ದೇಸಾಯಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು)

ಪಿ.ಆರ್. 2402

**ಸೇರ್ಪಡೆ**

**ಸಂ: ಕಂಇ 175 ಟಿಎನ್‌ಆರ್ 2009, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2009**

ಸಂಖ್ಯೆ: ಕಂಇ 175 ಟಿಎನ್‌ಆರ್ 2009, ದಿನಾಂಕ: 29–08–2009ರ ಸರ್ಕಾರಿ ಆದೇಶದ ಕೊನೆ ಕಂಡಿಕೆಯಾಗಿ ಈ ಕೆಳಕಂಡಂತೆ ಸೇರ್ಪಡೆ ಮಾಡಿ ಓದಿಕೊಳ್ಳುವುದು.

"ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಕೃಷಿ ನಿರ್ದೇಶಕರು, ಬೆಂಗಳೂರು. ಇವರು ಪೇಯೀಸ್ ರಶೀದಿ ಬಿಲ್ಲು ತಯಾರಿಸಿ, ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ, (ವಿಪತ್ತು ನಿರ್ವಹಣೆ) ಇವರಿಂದ ಮೇಲು ರುಜು ಪಡೆದು ರಾಜ್ಯ ಹುಜೂರು ಖಜಾನೆ ಬೆಂಗಳೂರು ಇಲ್ಲಿಂದ ಡ್ರಾ ಮಾಡಲು ಆದೇಶಿಸಿದೆ".

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

ಪಿ.ಆರ್. 2403

**ವಿಷಯ:** ಶ್ರೀ ಆರ್. ರಂಗಸ್ವಾಮಯ್ಯ, ತಹಶೀಲ್ದಾರ್, ಚಿಕ್ಕಮಗಳೂರು (ಪ್ರಸ್ತುತ ತಹಶೀಲ್ದಾರ್, ನಾಗಮಂಗಲ) ಇವರ ವಿರುದ್ಧ ಇಲಾಖಾ ವಿಚಾರಣೆಯಿಂದ ಕೈ ಬಿಡುವ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಅವರ ಪತ್ರ ಸಂ: ಇ.ಎಲ್.ಎನ್.(1):ಸಿಆರ್.2/2008–09 ದಿನಾಂಕ: 23–09–2008
2) ದಿನಾಂಕ: 22–10–2008ರ ಕಾರಣ ಕೇಳುವ ನೋಟೀಸು
3) ಶ್ರೀ ಆರ್. ರಂಗಸ್ವಾಮಯ್ಯ, ತಹಶೀಲ್ದಾರ್ ಇವರು ದಿನಾಂಕ: 17–11–2008ರ ಲಿಖಿತ ಹೇಳಿಕೆ.
4) ಸರ್ಕಾರದ ಪತ್ರ ಸಂ: ಆರ್‌ಡಿ 48 ಎಡಿಇ 2008, ದಿನಾಂಕ: 31–12–2008
5) ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಅವರ ಪತ್ರ ಸಂ: ಎ.ಎಲ್.ಎನ್.(1)ಸಿಆರ್–01/09–10, ದಿನಾಂಕ:16–06–09

**ಪ್ರಸ್ತಾವನೆ:**

ಮೇಲೆ ಕ್ರ.ಸಂ(1)ರಲ್ಲಿ ಓದಲಾದ ಪತ್ರದಲ್ಲಿ ಚಿಕ್ಕಮಗಳೂರು ಜಿಲ್ಲಾಧಿಕಾರಿಗಳು ಶ್ರೀ ರಂಗಸ್ವಾಮಯ್ಯ, ತಹಶೀಲ್ದಾರ್, ಚಿಕ್ಕಮಗಳೂರು (ಪ್ರಸ್ತುತ ತಹಶೀಲ್ದಾರ್ ನಾಗಮಂಗಲ) ಇವರು ಮತದಾರರ ಪಟ್ಟಿ ಪರಿಷ್ಕರಣೆ ವೇಳೆಯಲ್ಲಿ ಬೂತ್ ಲೆವೆಲ್ ಅಧಿಕಾರಿಯಾದ ಶ್ರೀ ಆರ್. ರಂಗಸ್ವಾಮಯ್ಯ ತಹಶೀಲ್ದಾರ್, ಚಿಕ್ಕಮಗಳೂರು ಇವರ ಮೇಲೆ ಈ ಕೆಳಕಂಡಂತೆ ಆರೋಪ ಹೊರಿಸಲಾಗಿತ್ತು.

ಮತದಾರರ ಪಟ್ಟಿ ಪರಿಷ್ಕರಣೆ ವೇಳೆಯಲ್ಲಿ ಬೂತ್ ಲೆವೆಲ್ ಅಧಿಕಾರಿಯು ಶ್ರೀ ಬಿ.ಅಮ್ಜದ್ ಇವರು ಚಿಕ್ಕಮಗಳೂರು ನಗರದ ಮಾರ್ಕೆಟ್ ರಸ್ತೆ ಬಡಾವಣೆಯ ಭಾಗದ ಸಂ:124ರಲ್ಲಿ ವಾಸವಿಲ್ಲದೇ ಇರುವುದರಿಂದ ಸದರಿಯವರ ಹೆಸರನ್ನು ಮತದಾರರ ಪಟ್ಟಿಯಿಂದ ಕೈಬಿಡುವಂತೆ ಶಿಫಾರಸ್ಸು ಮಾಡಿದ್ದು, ಹಾಗೂ ಹೆಸರನ್ನು ಮತದಾರರ ಪಟ್ಟಿಯಿಂದ ತೆಗೆದು ಹಾಕಲು ಚಿಕ್ಕಮಗಳೂರು ಉಪವಿಭಾಗಾಧಿಕಾರಿಗಳು ಹಾಗೂ ಮತದಾರರ ನೊಂದಣಾಧಿಕಾರಿಗಳು ನಮೂನೆ 7ರ ಮೇಲೆ ಹಾಗೂ ಕೈ ಬರಹ ಪ್ರತಿಯ ಮೇಲೆ ದಿನಾಂಕ: 25–02–2008ರಂದು ಆದೇಶಿಸಿದ್ದರೂ ಸಹ ಸದರಿಯವರ ಹೆಸರನ್ನು ಕೈ ಬಿಡದೆ ವಿಧಾನಸಭಾ ಸಾರ್ವತ್ರಿಕ ಚುನಾವಣೆ 2008ರ ಸಮಯದಲ್ಲಿ ದಿನಾಂಕ: 29–03–2008ರಂದು ಪ್ರಕಟಿತಗೊಂಡ ಮತದಾರರ ಪಟ್ಟಿಯೊಂದಿಗೆ ಕೈಬಿಡತಕ್ಕವುಗಳು, ತಿದ್ದುಪಡಿಗಳ ಪೂರಕ ಪಟ್ಟಿ ಅಥವಾ ಕೈಬರಹ ಪಟ್ಟಿಯನ್ನು, ಮುದ್ರಿತ ಪ್ರತಿಯನ್ನು ನಾಮಪತ್ರ ಪರಿಶೀಲನೆ ದಿವಸ ಚುನಾವಣಾಧಿಕಾರಿಗಳಿಗೆ ಕೊಡದೆ, ಶ್ರೀ ಬಿ.ಅಮ್ಜದ್ ಇವರ ನಾಮಪತ್ರ ಅಂಗೀಕರಿಸಲು ಅವಕಾಶ ಕಲ್ಪಿಸಿದ್ದಾರೆಂದು ವರದಿ ಮಾಡಿ ಮೇಲ್ಕಂಡ ಕರ್ತವ್ಯ ಲೋಪ ಎಸಗಿರುವ ಆಪಾದನೆಗೆ ಅವರುಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

ಸರ್ಕಾರವು ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ, ಶ್ರೀ ಆರ್.ರಂಗಸ್ವಾಮಯ್ಯ, ಹಿಂದಿನ ವಿಶೇಷ ತಹಶೀಲ್ದಾರ್ ಇವರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 11ರನ್ವಯ ಮೇಲೆ (2)ರಲ್ಲಿ ಓದಲಾದ ದಿನಾಂಕ: 22–10–2008ರಲ್ಲಿ ಕಾರಣ ಕೇಳುವ ನೋಟಿಸನ್ನು ಜಾರಿಗೊಳಿಸಲಾಯಿತು. ಸದರಿ ನೊಟೀಸಿಗೆ ಸದರಿ ಅಧಿಕಾರಿಯವರು ಮೇಲೆ ಓದಲಾದ ಕ್ರ.ಸಂ.(3)ರಲ್ಲಿ ರಕ್ಷಣಾ ಹೇಳಿಕೆ ಸಲ್ಲಿಸಿ, ಈ ಆರೋಪಗಳು ತಮಗೆ ಸಂಬಂಧಿಸಿರುವುದಿಲ್ಲವೆಂದು ಚುನಾವಣೆ ಕೆಲಸ ನಿರ್ವಹಿಸುವಲ್ಲಿ ಕರ್ತವ್ಯ ಲೋಪ ಎಸಗಿಲ್ಲವೆಂದು ತಿಳಿಸಿ ಮೇಲಿನ ಆರೋಪಕ್ಕೆ ಅಧಿಕಾರಿಯವರು ತಮ್ಮ ಸಮಜಾಯಿಷಿಯಲ್ಲಿ ಈ ಆರೋಪಗಳು ತಮಗೆ ಸಂಬಂಧಿಸಿರುವುದಿಲ್ಲವೆಂದು ಚುನಾವಣೆ ಕೆಲಸ ನಿರ್ವಹಿಸುವಲ್ಲಿ ಕರ್ತವ್ಯ ಲೋಪ ಎಸಗಿಲ್ಲವೆಂದು ತಿಳಿಸಿರುವರು. ಸದರಿ ಕಚೇರಿಯ ಚುನಾವಣಾ ಶಿರಸ್ತೇದಾರರಾದ ಶ್ರೀ ಮಹೇಶ್ವರಪ್ಪರವರು, ಶ್ರೀ ಅಮ್ಜದ್ ಹೆಸರನ್ನು ಕೈಬಿಡಲು ವಿಳಂಬ ಮಾಡಿರುತ್ತಾರೆ. ಈ ಬಗ್ಗೆ ಅವರಿಗೆ ಕೊಟ್ಟಿದ್ದ ನೋಟೀಸ್ ಉತ್ತರ ಸಾಕ್ಷಿಯಾಗಿರುತ್ತದೆ ಎಂದು ತಿಳಿಸಿರುವರು, ಶ್ರೀ ಮಹದೇಶ್ವರಪ್ಪನವರು ಮೆ:ಸುಮುಖ ಟೆಕ್ನಾಲಜಿನಲ್ಲಿ ಮತಪಟ್ಟಿಯಲ್ಲಿ ಶ್ರೀ ಅಮ್ಜದ್ ಅವರ ಹೆಸರನ್ನು ಕೈಬಿಡಲು ಕ್ರಮಕೈಗೊಂಡಿರುವುದಿಲ್ಲ. ಮತದಾರರ ಪಟ್ಟಿ ಭಾಗದ ಸಂ.124ಕ್ಕೆ ಸಂಬಂಧಿಸಿದಂತೆ ಮತಗಟ್ಟೆ ಅಧಿಕಾರಿಯಾದ ಶ್ರೀ ಎ.ಎಂ.ವಿಜಯಕುಮಾರ್ ರವರು ಕ್ರ.ಸಂ.1316, ಮನೆ ನಂ–95ರಲ್ಲಿ ಶ್ರೀ ಅಮ್ಜದ್‌ರವರು ವಾಸವಿಲ್ಲವೆಂದು, ಇವರ ಹೆಸರನ್ನು ಕೈ ಬಿಡಲು ನಮೂನೆ–7 ರಲ್ಲಿ ಅರ್ಜಿ ಪಡೆಯಲಾಗಿದ್ದು, ಶ್ರೀ ಮಹದೇಶ್ವರನವರು ಈ ಅರ್ಜಿ ಅನುಸಾರ ಕೈಬಿಡಲು ಯಾವುದೇ ಕ್ರಮಕೈಗೊಳ್ಳದೆ ಲೋಪ ಎಸಗಿರುತ್ತಾರೆ. ಈ ಬಗ್ಗೆ ಜಿಲ್ಲಾಧಿಕಾರಿಯವರು ಶಿರಸ್ತೇದಾರರಿಗೆ ಸಮಜಾಯಿಷಿ ಕೇಳಿ ನೋಟೀಸ್ ನೀಡಿರುತ್ತಾರೆ. ಈ ಎಲ್ಲಾ ಕಾರಣಗಳಿಂದಾಗಿ ಚುನಾವಣಾ ಶಿರಸ್ತೇದಾರರೇ ಶ್ರೀ ಅಮ್ಜದ್‌ರವರ ನಾಮಪತ್ರ ಅಂಗೀಕರಿಸಲು ಕಾರಣಕರ್ತರಾಗಿರುತ್ತಾರೆ. ಇದರಲ್ಲಿ ತಮ್ಮದೇನು ಪಾತ್ರವಿಲ್ಲವೆಂದು ಆರೋಪ ಮುಕ್ತರನ್ನಾಗಿ ಮಾಡಬೇಕೆಂದು ಕೋರಿರುತ್ತಾರೆ.

ಮೇಲೆ ಕ್ರ.ಸಂ.(4)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ರಂಗಸ್ವಾಮಿ ಅವರು ಲಿಖಿತ ಹೇಳಿಕೆ ನೀಡಿರುವ ಅಂಶಗಳ ಬಗ್ಗೆ ಪರಿಶೀಲಿಸಿ, ವರದಿ ಸಲ್ಲಿಸಲು ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರ.ಸಂ.(5)ರಲ್ಲಿ ಜಿಲ್ಲಾಧಿಕಾರಿಗಳು ದಿನಾಂಕ:16–06–2009ರ ಪತ್ರದಲ್ಲಿ ಶ್ರೀ ಅಮ್ಜದ್ದ ಇವರು 125–ಚಿಕ್ಕಮಗಳೂರು ವಿಧಾನಸಭಾ ಮತ ಕ್ಷೇತ್ರದ ಭಾಗ ಸಂಖ್ಯೆ 139ರಲ್ಲಿನ ಕ್ರಮ ಸಂ:139ರಲ್ಲಿ ಸೇರಿಸಿಕೊಂಡಿರುವುದರಿಂದ ಹಾಗೂ ಅವರು ವಾಸದ ಮನೆಯನ್ನು ಬದಲಾವಣೆ ಮಾಡಿದ ಕಾರಣ, ಇವರ ಹೆಸರನ್ನು ಬಿ.ಎಲ್.ಓ.ರವರು ನೀಡಿದ ವರದಿಯನ್ವಯ ತಹಶೀಲ್ದಾರರ ಶಿಫಾರಸ್ಸಿನಂತೆ ಸದರಿ ವಿಧಾನಸಭಾ ಮತಕ್ಷೇತ್ರದ ಭಾಗ ಸಂ:93ರಲ್ಲಿನ ಕ್ರ.ಸಂ. 1316ರಲ್ಲಿನ ಹೆಸರನ್ನು ಕೈ ಬಿಡಲು ಆದೇಶಿಸಲಾಗಿತ್ತು. ಆದರೆ ಮೆ:ಸುಮುಖ ಟೆಕ್ನಾಲಜಿ ಬೆಂಗಳೂರುರವರಿಂದ ಮುದ್ರಿಸಿದ ಕೈಬಿಡತಕ್ಕವುಗಳ ಪಟ್ಟಿಯನ್ನು ಮುದ್ರಿಸಿರುವುದಿಂದ ಗೊಂದಲಮಯವಾಗಿದೆಯೇ ವಿನ: ಇದಕ್ಕೆ ಬೇರೆ ಯಾರೂ ಹೊಣೆಗಾರರಾಗುವುದಿಲ್ಲವೆಂದು ತಿಳಿಸುತ್ತ ತಹಶೀಲ್ದಾರ್ ಶ್ರೀ ಆರ್. ರಂಗಸ್ವಾಮಯ್ಯ ಇವರ ಮೇಲಿನ ಉದ್ದೇಶಿತ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರು ನೀಡಿರುವ ವರದಿಯನ್ನು ಒಪ್ಪಿ, ಶ್ರೀ ರಂಗಸ್ವಾಮಯ್ಯ ಇವರ ವಿರುದ್ಧ ಉದ್ದೇಶಿಸಲಾಗಿದ್ದ ಶಿಸ್ತು ಕ್ರಮವನ್ನು ಕೈ ಬಿಡಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 48 ಎಡಿಇ 2008, ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ರಂಗಸ್ವಾಮಯ್ಯ ನೀಡಿರುವ ಸಮಜಾಯಿಷಿ ಹಾಗೂ ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರು ನೀಡಿರುವ ವರದಿಯನ್ನು ಸರ್ಕಾರವು ಒಪ್ಪಿ ಶ್ರೀ ರಂಗಸ್ವಾಮಯ್ಯ, ಹಿಂದಿನ ತಹಶೀಲ್ದಾರ್ ಚಿಕ್ಕಮಗಳೂರು ತಾಲ್ಲೂಕು (ಪ್ರಸ್ತುತ ತಹಶೀಲ್ದಾರ್, ನಾಗಮಂಗಲ) ಇವರನ್ನು ಇವರ ವಿರುದ್ಧ ಹೂಡಲು ಉದ್ದೇಶಿಸಲ್ಪಟ್ಟ ಇಲಾಖಾ ವಿಚಾರಣೆಯನ್ನು ಕೈ ಬಿಟ್ಟು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2404 **ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಪ್ರವಾಹ ಪೀಡಿತ ಜಿಲ್ಲೆಗಳಲ್ಲಿ ಹಾನಿಯ ಅಂದಾಜು ಹಾಗೂ ಇತರೇ ಪರಿಹಾರ ಕಾರ್ಯ ಕೈಗೊಳ್ಳಲು ತಹಶೀಲ್ದಾರರುಗಳನ್ನು ನೇಮಿಸುವ ಕುರಿತು.

**ಪ್ರಸ್ತಾವನೆ:**

ರಾಜ್ಯದಲ್ಲಿ ಅಕ್ಟೋಬರ್ 2009ರ ಮೊದಲನೆ ವಾರದಲ್ಲಿ ರಾಜ್ಯದ ಕೆಲವು ಜಿಲ್ಲೆಗಳಲ್ಲಿ ವಿಪರೀತ ಪ್ರವಾಹ ಉಂಟಾಗಿದ್ದು, ಇಂತಹ ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಬೆಳೆ ನಾಶದ ಅಂದಾಜು ಮಾಡುವುದು, ಬಿದ್ದ ಮನೆಗಳನ್ನು ಅಂದಾಜು ಮಾಡುವುದು, ಜಾನುವಾರುಗಳ ಹಾನಿ ಅಂದಾಜು ಮಾಡುವುದು, ನಾಶವಾದ ಮೂಲ ಸೌಕರ್ಯಗಳನ್ನು ಪುನರ್

ನಿರ್ಮಿಸುವುದು ಹಾಗೂ ಪುನರ್ವಸತಿ ಕಲ್ಪಿಸಬೇಕಾದ ಹಳ್ಳಿಗಳಲ್ಲಿ ಭೂಮಿಯನ್ನು ಖರೀದಿಸುವುದು/ಭೂಸ್ವಾಧೀನಗೊಳಿಸುವುದು ಇತ್ಯಾದಿ ಕೆಲಸಗಳು ಅತ್ಯಂತ ದೊಡ್ಡ ಪ್ರಮಾಣದ್ದಾಗಿದ್ದು ಅವುಗಳನ್ನು ನಿರ್ವಹಿಸಲು ತಾಲೂಕಿಗೆ ಒಬ್ಬೊಬ್ಬರಂತೆ ಇರುವ ತಹಶೀಲ್ದಾರ್‌ಗಳಿಂದ ಕಷ್ಟಸಾಧ್ಯವೆಂದು ಸರ್ಕಾರ ಮನಗಂಡಿದೆ.

ಈ ಹಿನ್ನೆಲೆಯಲ್ಲಿ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ನಷ್ಟ ಅನುಭವಿಸಿರುವ ಉತ್ತರ ಕರ್ನಾಟಕದ ಆರು ಜಿಲ್ಲೆಗಳಲ್ಲಿ ಅದರಲ್ಲೂ ವಿಶೇಷವಾಗಿ ಅತಿ ಹೆಚ್ಚು ಹಾನಿಗೊಳಗಾದ ಹೋಬಳಿಗಳಲ್ಲಿ ಮೇಲಿನ ಕಾರ್ಯಗಳನ್ನು ನಿರ್ವಹಿಸಲು ಪ್ರತ್ಯೇಕವಾಗಿ ಹೆಚ್ಚುವರಿ ತಹಶೀಲ್ದಾರ್‌ಗಳನ್ನು ನೇಮಿಸಿ ಶೀಘ್ರವಾಗಿ ಕಾರ್ಯಗಳನ್ನು ಕೈಗೆತ್ತಿಕೊಂಡು ಮುಗಿಸುವ ಉದ್ದೇಶಕ್ಕಾಗಿ ಹೆಚ್ಚುವರಿ ತಹಶೀಲ್ದಾರ್‌ಗಳನ್ನು ಮುಂದಿನ ಮೂರು ತಿಂಗಳ ಅವಧಿಯವರೆಗೆ ನೇಮಿಸುವುದು ಅಗತ್ಯವಾಗಿದೆ. ಆದುದರಿಂದ ಮೇಲೆ ತಿಳಿಸಿದ ಕಾರ್ಯಗಳನ್ನು ನಿರ್ವಹಿಸಲು ಪ್ರವಾಹ ಪೀಡಿತ ಜಿಲ್ಲೆಗಳಿಗೆ ಪರಿಹಾರ ಕಾರ್ಯಗಳನ್ನು ತ್ವರಿತಗೊಳಿಸಲು ಈ ಕೆಳಕಂಡ ಜಿಲ್ಲೆಗಳಿಗೆ ಹೆಚ್ಚುವರಿ ತಹಶೀಲ್ದಾರ್‌ಗಳನ್ನು ರೀಡಿಪ್ಲಾಯ್‌ಮೆಂಟ್ ಮಾಡುವ ಮೂಲಕ ನೇಮಿಸುವುದು ಅವಶ್ಯವಾಗಿರುತ್ತದೆ.

| | | |
|---|---|---|
| ರಾಯಚೂರು ಜಿಲ್ಲೆ | – | 3 ತಹಶೀಲ್ದಾರರುಗಳು |
| ಬಾಗಲಕೋಟೆ ಜಿಲ್ಲೆ | – | 3 ತಹಶೀಲ್ದಾರರುಗಳು (ಬಾದಾಮಿ–2, ಹುನಗುಂದ–1) |
| ಬಿಜಾಪುರ ಜಿಲ್ಲೆ | – | 2 ತಹಶೀಲ್ದಾರರುಗಳು |
| ಗದಗ ಜಿಲ್ಲೆ | – | 2 ತಹಶೀಲ್ದಾರರುಗಳು |
| ಬಳ್ಳಾರಿ ಜಿಲ್ಲೆ | – | 1 ತಹಶೀಲ್ದಾರರು |
| ಕೊಪ್ಪಳ ಜಿಲ್ಲೆ | – | 1 ತಹಶೀಲ್ದಾರರು |

ಆದುದರಿಂದ, ಈ ಕೆಳಕಂಡ 10 ತಹಶೀಲ್ದಾರರುಗಳನ್ನು ಕಾರ್ಯನಿರ್ವಹಿಸುತ್ತಿರುವ ಹುದ್ದೆಗಳ ಸಮೇತ ಮೂರು ತಿಂಗಳ ಅವಧಿಗೆ ರಿಡಿಪ್ಲ್ಯಾಯ್‌ಮೆಂಟ್ ಮೂಲಕ ಹಾಗೂ ಇಲಾಖೇತರ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಇಬ್ಬರು ತಹಶೀಲ್ದಾರರುಗಳನ್ನು ವರ್ಗಾವಣೆ ಮೂಲಕ ನೇಮಿಸಲು ತೀರ್ಮಾನಿಸಿದೆ.

| ಕ್ರ. ಸಂ. | ತಹಶೀಲ್ದಾರರ ಹೆಸರು ಹಾಗೂ ಹಾಲಿ ಕಾರ್ಯನಿರ್ವಹಿಸುತ್ತಿರುವ ಸ್ಥಳ | ರೀಡಿಪ್ಲಾಯ್‌ಮೆಂಟ್ ಮೂಲಕ ನೇಮಿಸಿದ ಸ್ಥಳ |
|---|---|---|
| 1 | ಪ್ರಾಣೇಶ್ ಕುಮಾರ್<br>ವಿಶೇಷ ತಹಶೀಲ್ದಾರ್ ಗುಲ್ಬರ್ಗ ಉತ್ತರ. | ರಾಯಚೂರು |
| 2 | ಪಾಲಾಕ್ಷ ಗೌಡ ಪಾಟೀಲ್<br>ಪುರಸಭಾ ತಹಶೀಲ್ದಾರ್, ಬಳ್ಳಾರಿ ಜಿಲ್ಲೆ. | ಬಳ್ಳಾರಿ |
| 3 | ಬಿ.ಎಸ್. ಮಂಜುನಾಥ್ ಸ್ವಾಮಿ<br>ಚುನಾವಣಾ ತಹಶೀಲ್ದಾರ್ ದಾವಣಗೆರೆ ಜಿಲ್ಲೆ. | ರಾಯಚೂರು |
| 4 | ವೈ.ಎಸ್. ಮಲ್ಲಿಕಾರ್ಜುನ<br>ವಿಶೇಷ ತಹಶೀಲ್ದಾರ್, ಗುರುಮಿಠಕಲ್ ಗುಲ್ಬರ್ಗ ಜಿಲ್ಲೆ. | ಬಿಜಾಪುರ |
| 5 | ಎಂ.ಪಿ. ಸಾವಂತ್<br>ಪುರಸಭಾ ತಹಶೀಲ್ದಾರ್ ಉತ್ತರ ಕನ್ನಡ ಜಿಲ್ಲೆ. | ಬಾಗಲಕೋಟೆ<br>(ಬಾದಾಮಿ ತಾಲ್ಲೂಕು) |
| 6 | ಕೆ.ಪಿ. ಕೃಷ್ಣ<br>ಚುನಾವಣಾ ತಹಶೀಲ್ದಾರ್ ಬಾಗಲಕೋಟೆ ಜಿಲ್ಲೆ. | ಬಾಗಲಕೋಟೆ<br>(ಬಾದಾಮಿ ತಾಲ್ಲೂಕು) |
| 7 | ಆರ್.ಜಿ. ನಾಡಿಗೇರ್<br>ಚುನಾವಣಾ ತಹಶೀಲ್ದಾರ್ ಬೀದರ್ ಜಿಲ್ಲೆ | ಬಿಜಾಪುರ |
| 8 | ಮಧುಸೂದನ್ ಶಾಸ್ತ್ರಿ<br>ಚುನಾವಣಾ ತಹಶೀಲ್ದಾರ್ ಗುಲ್ಬರ್ಗ ಜಿಲ್ಲೆ | ರಾಯಚೂರು |
| 9 | ಬಿ. ನಾಗರಾಜ<br>ಚುನಾವಣಾ ತಹಶೀಲ್ದಾರ್ ಕೊಪ್ಪಳ ಜಿಲ್ಲೆ | ಕೊಪ್ಪಳ |
| 10 | ಹೆಚ್. ನಂಜಯ್ಯ<br>ಚುನಾವಣಾ ತಹಶೀಲ್ದಾರ್ ಹಾವೇರಿ ಜಿಲ್ಲೆ. | ಬಾಗಲಕೋಟೆ<br>ಹುನಗುಂದ ತಾಲ್ಲೂಕು |

**ವರ್ಗಾವಣೆ ಮೂಲಕ ನೇಮಿಸಲಾದ ತಹಶೀಲ್ದಾರರುಗಳು**

| | | |
|---|---|---|
| 1 | ಎಂ.ಎಂ. ಮುಲ್ಲಾ<br>ವಿಶೇಷ ತಹಶೀಲ್ದಾರ್ ಕೆಯುಐಡಿಎಫ್‌ಸಿ ಧಾರವಾಡ | ಗದಗ |
| 2 | ರವಿ ಎಂ. ತಿರ್ಲಾಪುರ<br>ವಿಶೇಷ ತಹಶೀಲ್ದಾರ್ ಕೆಯುಐಡಿಎಫ್‌ಸಿ ಧಾರವಾಡ | ಗದಗ |

ಮೇಲೆ ತಿಳಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 586 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರವಾಹ ಪಿಡೀತ ಜಿಲ್ಲೆಗಳಲ್ಲಿ ಬೆಳೆ ನಾಶದ ಅಂದಾಜು ಮಾಡುವುದು, ಬಿದ್ದ ಮನೆಗಳನ್ನು ಅಂದಾಜು ಮಾಡುವುದು, ಜಾನುವಾರುಗಳ ಹಾನಿ ಅಂದಾಜು ಮಾಡುವುದು, ನಾಶವಾದ ಮೂಲ ಸೌಕರ್ಯಗಳನ್ನು ಪುನರ್ ನಿರ್ಮಿಸುವುದು ಹಾಗೂ ಪುನರ್ವಸತಿ ಕಲ್ಪಿಸಬೇಕಾದ ಹಳ್ಳಿಗಳಲ್ಲಿ ಭೂಮಿಯನ್ನು ಖರೀದಿಸುವುದು/ ಭೂಸ್ವಾಧೀನಗೊಳಿಸುವುದು ಇತ್ಯಾದಿ ಕೆಲಸಗಳು/ ಪರಿಹಾರ ಕಾರ್ಯಗಳನ್ನು ತ್ವರಿತಗೊಳಿಸಲು ಈ ಕೆಳಕಂಡ 10 ಜನ ತಹಶೀಲ್ದಾರರುಗಳನ್ನು ಹುದ್ದೆಗಳ ಸಮೇತ 3 ತಿಂಗಳ ಅವಧಿಗೆ ಸ್ಥಳಾಂತರಿಸಿ (ರಿಡೆಪ್ಲಾಯ್‌ಮೆಂಟ್) ನೇಮಿಸಲಾಗಿದೆ.

| ಕ್ರ. ಸಂ. | ತಹಶೀಲ್ದಾರರ ಹೆಸರು ಹಾಗೂ ಹಾಲಿ ಕಾರ್ಯನಿರ್ವಹಿಸುತ್ತಿರುವ ಸ್ಥಳ | ರೀಡಿಪ್ಲಾಯ್‌ಮೆಂಟ್ ಮೂಲಕ ನೇಮಿಸಿದ ಸ್ಥಳ |
|---|---|---|
| 1 | ಪ್ರಾಣೇಶ್ ಕುಮಾರ್<br>ವಿಶೇಷ ತಹಶೀಲ್ದಾರ್ ಗುಲ್ಬರ್ಗ ಉತ್ತರ. | ರಾಯಚೂರು |
| 2 | ಪಾಲಾಕ್ಷ ಗೌಡ ಪಾಟೀಲ್<br>ಪುರಸಭಾ ತಹಶೀಲ್ದಾರ್, ಬಳ್ಳಾರಿ ಜಿಲ್ಲೆ. | ಬಳ್ಳಾರಿ |
| 3 | ಬಿ.ಎಸ್. ಮಂಜುನಾಥ್ ಸ್ವಾಮಿ<br>ಚುನಾವಣಾ ತಹಶೀಲ್ದಾರ್ ದಾವಣಗೆರೆ. | ರಾಯಚೂರು |
| 4 | ವೈ.ಎಸ್. ಮಲ್ಲಿಕಾರ್ಜುನ<br>ವಿಶೇಷ ತಹಶೀಲ್ದಾರ್, ಗುರುಮಿಠಕಲ್ ಗುಲ್ಬರ್ಗ ಜಿಲ್ಲೆ. | ಬಿಜಾಪುರ |
| 5 | ಎಂ.ಪಿ. ಸಾವಂತ್<br>ಪುರಸಭಾ ತಹಶೀಲ್ದಾರ್ ಉತ್ತರ ಕನ್ನಡ ಜಿಲ್ಲೆ. | ಬಾಗಲಕೋಟೆ<br>(ಬಾದಾಮಿ ತಾಲ್ಲೂಕು) |
| 6 | ಕೆ.ಪಿ. ಕೃಷ್ಣ<br>ಚುನಾವಣಾ ತಹಶೀಲ್ದಾರ್ ಬಾಗಲಕೋಟೆ ಜಿಲ್ಲೆ. | ಬಾಗಲಕೋಟೆ<br>(ಬಾದಾಮಿ ತಾಲ್ಲೂಕು) |
| 7 | ಆರ್.ಜಿ. ನಾಡಿಗೇರ್<br>ಚುನಾವಣಾ ತಹಶೀಲ್ದಾರ್ ಬೀದರ್. | ಬಿಜಾಪುರ |
| 8 | ಮಧುಸೂದನ ಶಾಸ್ತ್ರಿ<br>ಚುನಾವಣಾ ತಹಶೀಲ್ದಾರ್ ಗುಲ್ಬರ್ಗ ಜಿಲ್ಲೆ | ರಾಯಚೂರು |
| 9 | ಬಿ. ನಾಗರಾಜ<br>ಚುನಾವಣಾ ತಹಶೀಲ್ದಾರ್ ಕೊಪ್ಪಳ ಜಿಲ್ಲೆ | ಕೊಪ್ಪಳ |
| 10 | ಹೆಚ್. ನಂಜಯ್ಯ<br>ಚುನಾವಣಾ ತಹಶೀಲ್ದಾರ್ ಹಾವೇರಿ ಜಿಲ್ಲೆ. | ಬಾಗಲಕೋಟೆ<br>ಹುನಗುಂದ ತಾಲ್ಲೂಕು |

**ವರ್ಗಾವಣೆ ಮೂಲಕ ನೇಮಿಸಲಾದ ತಹಶೀಲ್ದಾರರುಗಳು**

| | | |
|---|---|---|
| 1 | ಎಂ.ಎಂ.ಮುಲ್ಲಾ<br>ವಿಶೇಷ ತಹಶೀಲ್ದಾರ್ ಕೆಯುಐಡಿಎಫ್‌ಸಿ ಧಾರವಾಡ | ಗದಗ |
| 2 | ರವಿ ಎಂ.ತಿರ್ಲಾಪುರ<br>ವಿಶೇಷ ತಹಶೀಲ್ದಾರ್ ಕೆಯುಐಡಿಎಫ್‌ಸಿ ಧಾರವಾಡ | ಗದಗ |

ಮೇಲಿನಂತೆ ನೇಮಕಾತಿಗೊಂಡ ಎಲ್ಲಾ ತಹಶೀಲ್ದಾರ್‌ಗಳು ಈಗ ಕೆಲಸ ಮಾಡುತ್ತಿರುವ ಹುದ್ದೆಗಳಿಂದ ಮುಂದಿನ 3 ದಿನಗಳಲ್ಲಿ ಬಿಡುಗಡೆ ಹೊಂದಿ ಮರುದಿನವೇ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಕಚೇರಿಯಲ್ಲಿ ಕರ್ತವ್ಯಕ್ಕೆ ಹಾಜರಾಗುವುದು. ಹಾಗು ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಂದ ಮುಂದಿನ ನಿರ್ದೇಶನ ಮತ್ತು ಮಾರ್ಗದರ್ಶನ ಪಡೆಯುವುದು.

ಹೆಚ್ಚುವರಿಯಾಗಿ ನೇಮಕಗೊಂಡ ತಹಶೀಲ್ದಾರ್‌ಗಳೆಲ್ಲರೂ ತಮಗೆ ನಿಗದಿಗೊಳಿಸಿದ ಹೋಬಳಿಗಳಲ್ಲಿ/ ತಾಲ್ಲೂಕುಗಳಲ್ಲಿರುವ ರೆಗ್ಯೂಲರ್ ತಹಶೀಲ್ದಾರ್‌ಗಳು ಹೊಂದಿರುವ ಎಲ್ಲಾ ಅಧಿಕಾರವನ್ನು ಹೊಂದಿರುತ್ತಾರೆ.

ಹೆಚ್ಚುವರಿ ತಹಶೀಲ್ದಾರ್‌ಗಳಿಗೆ ಪ್ರತಿಯೊಬ್ಬರಿಗೂ ಒಂದೊಂದರಂತೆ ಸ್ಥಳೀಯವಾಗಿ ಲಭ್ಯವಿರುವ ಖಾಸಗಿ ಜೀಪುಗಳನ್ನು ಬಾಡಿಗೆ ರೂಪದಲ್ಲಿ ಪಡೆದು ತಕ್ಷಣವೇ ಒದಗಿಸುವ ವ್ಯವಸ್ಥೆಯನ್ನು ಆಯಾ ಜಿಲ್ಲಾಧಿಕಾರಿಗಳು ಮಾಡತಕ್ಕದ್ದು.

ಹೆಚ್ಚುವರಿ ತಹಶೀಲ್ದಾರ್‌ಗಳ ಕಚೇರಿಗಳಿಗೆ ಒಬ್ಬ ಶಿರಸ್ತೇದಾರ್, ಒಬ್ಬ ಎಫ್.ಡಿ.ಸಿ. ಒಬ್ಬ ಎಸ್.ಡಿ.ಸಿ ಒಬ್ಬ ಗಣಕಯಂತ್ರ ಆಪರೇಟರ್, ಒಂದು ಬಾಡಿಗೆ ಗಣಕಯಂತ್ರ, ಒಂದು ಬಾಡಿಗೆ ಜೀಪು ಹಾಗೂ ಎರಡು ಗ್ರೂಪ್–ಡಿ–ನೌಕರರನ್ನು ತಕ್ಷಣವೇ ನೇಮಿಸಿ ವರ್ಗಾಯಿಸಿ ಆಯಾ ಸ್ಥಳಗಳಲ್ಲಿ ಹಾಜರಾಗುವಂತೆ ಶೀಘ್ರವಾಗಿ ಆದೇಶಗಳನ್ನು ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು ಹೊರಡಿಸಿ ಕಂದಾಯ ಕಾರ್ಯದರ್ಶಿಯವರಿಗೆ ವರದಿ ಸಲ್ಲಿಸುವುದು. ಹಂಗಾಮಿ ಕಟ್ಟಡಗಳ ಅವಶ್ಯಕತೆ ಇದ್ದಲ್ಲಿ ಹಾಗೂ ಸರ್ಕಾರಿ ಕಟ್ಟಡಗಳು ಲಭ್ಯವಿಲ್ಲದಿದ್ದಲ್ಲಿ ಸ್ಥಳೀಯವಾಗಿ ಬಾಡಿಗೆಗೆ ಪಡೆಯುವುದು.

ಈ ಹೆಚ್ಚುವರಿ ಕಚೇರಿಗಳಿಗೆ ಬೇಕಾಗುವ ಪೀಠೋಪಕರಣಗಳನ್ನು ಸ್ಥಳೀಯವಾಗಿ ವಿವಿಧ ಇಲಾಖೆಗಳಿಂದ ಪಡೆಯುವುದು ಅಥವಾ ಮುಕ್ತ ಮಾರುಕಟ್ಟೆಗಳಿಂದ ಪಡೆದು ಶೀಘ್ರವಾಗಿ ಒದಗಿಸುವ ವ್ಯವಸ್ಥೆಯನ್ನು ಆಯಾ ಜಿಲ್ಲಾಧಿಕಾರಿಗಳು ಮಾಡತಕ್ಕದ್ದು.

ಸರ್ಕಾರೇತರ ಸಂಸ್ಥೆಗಳಿಂದ/ ನಿಯೋಜನೆ ಹುದ್ದೆಯಿಂದ ವರ್ಗಾವಣೆಗೊಂಡ ತಹಶೀಲ್ದಾರ್‌ಗಳ ವಿಷಯದಲ್ಲಿ ನಿಯಮಗಳ ಪ್ರಕಾರ ಸೂಕ್ತ ವ್ಯವಸ್ಥೆ ಆಗುವವರೆಗೆ ಆಯಾ ತಿಂಗಳ ವೇತನವನ್ನು ತಾತ್ಕಾಲಿಕವಾಗಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಭರಿಸಿ ಸೂಕ್ತ ಲೆಕ್ಕ ಪತ್ರಗಳನ್ನು ಇಟ್ಟು ನಂತರ ವೇತನವನ್ನು ನಿಧಿಗೆ ಮರುಪಾವತಿ ಮಾಡತಕ್ಕದ್ದು. ಮೇಲಿನಂತೆ ವರ್ಗಾವಣೆಗೊಂಡ ತಹಶೀಲ್ದಾರ್‌ಗಳು ಹೊಂದಿರುವ ಖಾಸಗಿ ಮೊಬೈಲ್ ದೂರವಾಣಿಯನ್ನು ತಕ್ಷಣದಿಂದಲೇ ಸರ್ಕಾರಿ ಕೆಲಸಗಳಿಗೆ ಉಪಯೋಗಿಸಬಹುದು. ಹಾಗೂ ಇದಕ್ಕಾಗಿ ಪ್ರತಿ ತಿಂಗಳು ರೂ.1,000/– ಕ್ಕೆ ಮೀರದಂತೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಪ್ರತಿಯೊಬ್ಬ ತಹಶೀಲ್ದಾರ್‌ಗಳಿಗೆ ಆಯಾ ಜಿಲ್ಲಾಧಿಕಾರಿಗಳು ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2405

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** 2009–10ನೇ ಸಾಲಿನಲ್ಲಿ ಭಾರೀ ಮಳೆ ಹಾಗೂ ಪ್ರವಾಹದ ವಿಕೋಪಗಳಿಂದ ಆಗಿರುವ ಹಾನಿಗಳಿಗೆ ತುರ್ತು ಪರಿಹಾರ ಕ್ರಮಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ:** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ:**

2009ನೇ ಸೆಪ್ಟೆಂಬರ್ ಮಾಹೆಯ ಅಂತ್ಯದಲ್ಲಿ ಹಾಗೂ ಅಕ್ಟೋಬರ್ ಮಾಹೆಯ ಮೊದಲ ವಾರದಲ್ಲಿ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಬಿದ್ದ ಬಾರಿ ಮಳೆಯಿಂದ ಉಂಟಾದ ಪ್ರವಾಹ ಪರಿಸ್ಥಿತಿಯಿಂದಾಗಿ ಬಾಗಲಕೋಟೆ, ಬಿಜಾಪುರ, ಗದಗ, ರಾಯಚೂರು, ಕೊಪ್ಪಳ, ಬಳ್ಳಾರಿ, ಗುಲ್ಬರ್ಗಾ, ಧಾರವಾಡ, ಬೀದರ್, ಹಾವೇರಿ, ಬೆಳಗಾಂ ಹಾಗೂ ಚಿತ್ರದುರ್ಗ ಜಿಲ್ಲೆಗಳಲ್ಲಿ ಮಾನವ ಜೀವಹಾನಿ, ಜಾನುವಾರು ಹಾನಿ, ಮನೆಹಾನಿ, ಬೆಳೆಹಾನಿ ಹಾಗೂ ಮೂಲಭೂತ ಸೌಕರ್ಯಗಳಿಗೆ ಹಾನಿ ಉಂಟಾಗಿದೆ. ಈ ಜಿಲ್ಲೆಗಳಲ್ಲಿ ಜೀವಹಾನಿ, ಬೆಳೆಹಾನಿ, ಮನೆಹಾನಿ, ಮೂಲಭೂತ ಸೌಕರ್ಯಗಳ ಹಾನಿಗೆ ತುರ್ತು ಪರಿಹಾರ ಕಾರ್ಯ ಕೈಗೊಳ್ಳಲು ಹಣ ಬಿಡುಗಡೆ ಮಾಡುವ ಅವಶ್ಯಕತೆಯಿರುವುದನ್ನು ಪರಿಗಣಿಸಿ ಸರ್ಕಾರವು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಹಣ ಬಿಡುಗಡೆ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 137 ಟಿಎನ್‌ಆರ್ 2009 (1), ಬೆಂಗಳೂರು, ದಿನಾಂಕ: 3ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ರೂ.10,500.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|
| 1 | ಬಾಗಲಕೋಟೆ | 1200.00 |
| 2 | ಬಿಜಾಪುರ | 1200.00 |
| 3 | ಗದಗ | 1200.00 |
| 4 | ರಾಯಚೂರು | 1200.00 |
| 5 | ಕೊಪ್ಪಳ | 1200.00 |
| 6 | ಬಳ್ಳಾರಿ | 1200.00 |
| 7 | ಗುಲ್ಬರ್ಗಾ | 600.00 |
| 8 | ಬೆಳಗಾಂ | 600.00 |
| 9 | ಧಾರವಾಡ | 600.00 |
| 10 | ಹಾವೇರಿ | 500.00 |
| 11 | ಬೀದರ್ | 500.00 |
| 12 | ಚಿತ್ರದುರ್ಗ | 500.00 |
| | **ಒಟ್ಟು** | **10,500.00** |

**(ರೂ.ಹತ್ತು ಸಾವಿರದ ಐದುನೂರು ಲಕ್ಷಗಳು ಮಾತ್ರ)**

1) ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಈ ಕೆಳಕಂಡಂತೆ ಆದ್ಯತೆಯ ಮೇರೆಗೆ ಉಪಯೋಗಿಸುವುದು

a) ಮಾನವ/ಪ್ರಾಣ ಜೀವಹಾನಿ

b) ಮನೆ ಹಾನಿ

c) ಬೆಳೆ ಹಾನಿ

d) ಹಾನಿಗೊಳಗಾದ ಮೂಲಭೂತ ಸೌಕರ್ಯಗಳಿಗೆ ತುರ್ತು ರಿಪೇರಿ.

e) ಕುಡಿಯುವ ನೀರಿನ ವ್ಯವಸ್ಥೆ

f) ಸಾಂಕ್ರಾಮಿಕ ರೋಗ ತಡೆಗಟ್ಟಲು ಹಾಗೂ ನೈರ್ಮಲ್ಲೀಕರಣಕ್ಕೆ

g) ಜಾನುವಾರುಗಳ ಸಂರಕ್ಷಣೆ

2) ಕೇಂದ್ರ ಸರ್ಕಾರವು ಹೊರಡಿಸಿರುವ ಸಿಆರ್‌ಎಫ್/ಎನ್‌ಸಿಸಿಎಫ್ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು.

3) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಸಿಆರ್‌ಎಫ್/ಎನ್‌ಸಿಸಿಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ. ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

4) ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್ ಪಿ.ಡಿ.ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–02–110–0–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 88 ಬಿಆರ್‌ಎಸ್ 2009 ದಿನಾಂಕ:03–10–2009 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ದೇಸಾಯಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು)

ಪಿ.ಆರ್. 2406

**ವಿಷಯ:** ಶ್ರೀ ಜೆ.ಆರ್.ರೂಗಿ, ಭೂ ದಾಖಲೆಗಳ ಉಪ ನಿರ್ದೇಶಕರು, ಬಿಜಾಪುರ ಇವರ ವಿರುದ್ಧ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ನೋಟೀಸ್ ಸಂ.ಕಂ.ಇ 36 ವಿಕೋವಿ 2005 ದಿ:24–08–2006
2) ಶ್ರೀ ಜೆ.ಆರ್.ರೂಗಿ ಭೂ.ಉ.ನಿ. ಅವರ ದಿ:22–09–2006ರ ಲಿಖಿತ ಹೇಳಿಕೆ.
3) ಸರ್ಕಾರಿ ಆದೇಶ ಸಂ.ಕಂ ಇ 19 ಭೂದಾಸೇ (1) 2007 ದಿ: 24–5–2007
4) ಅಧಿಸೂಚನೆ ಸಂ.ಕಂಇ 19 ಭೂದಾಸೇ (1) 2007 ದಿ: 26–6–2007
5) ಸರ್ಕಾರದ ನೋಟಿಸ್ ಸಂ.ಕಂಇ 19 ಭೂದಾಸೇ (1) 2007 ದಿನಾಂಕ 18–2–2008
6) ಸರ್ಕಾರಿ ಆದೇಶ ಸಂ.ಕಂ ಇ 19 ಭೂದಾಸೇ (1) 2007 ದಿನಾಂಕ 7.12.2007
7) ವಿಚಾರಣಾಧಿಕಾರಿಗಳ ಪತ್ರ ಸಂ.ಉ.ಆ (ಆಸ್ತಿಗಳು) ಪಿಆರ್.1/08–09 ದಿನಾಂಕ 3.4.2009
8) ಎರಡನೇ ಕಾರಣ ಕೇಳಿ ನೋಟಿಸ್ ಸಂ.ಕಂ.ಇ 19 ಭೂದಾಸೇ (3) 2007 ದಿನಾಂಕ 13.5.2009

**ಪ್ರಸ್ತಾವನೆ**

ಶ್ರೀ ಜೆ.ಆರ್. ರೂಗಿ, ಭೂದಾಖಲೆಗಳ ಉಪನಿರ್ದೇಶಕರು, ಭೂಮಾಪನ ಇಲಾಖೆ, ಬಿಜಾಪುರರವರು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಚಿಕ್ಕೋಡಿ ಉಪವಿಭಾಗ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಇವರು ಆಸ್ತಿಯ ಪಾಲುಗಾರಿಕೆ ಸಂಬಂಧ ಅಥಣಿ ನ್ಯಾಯಾಲಯದಲ್ಲಿ ಅಸಲು ದಾವೆ ಸಂ:11/03, 108/04 ಪ್ರಕರಣಗಳು ನ್ಯಾಯಾಲಯದಲ್ಲಿ ಇರುವಾಗ ಅಥಣಿ ನಗರದ ನಗರ ಮಾಪನ ವ್ಯಾಪ್ತಿಯ ಸಿಟಿ ಸ.ನಂ.1040, 2573, 2575, 2577, 2579, 3408ರ ಬಗ್ಗೆ ಕಾನೂನು ಬಾಹಿರವಾಗಿ ಕ್ರಮ ಎಸಗಿ ಕರ್ತವ್ಯ ಲೋಪ ಮತ್ತು ನಡತೆ ನಿಯಮಗಳ ಉಲ್ಲಂಘನೆ ಮಾಡಿರುವ ಆರೋಪಗಳಿಗಾಗಿ ಶ್ರೀ ಜೆ.ಆರ್. ರೂಗಿ ರವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ:24–8–2006ರ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಸದರಿ ನೋಟೀಸಿಗೆ ಶ್ರೀಯುತರು ಮೇಲೆ (2)ರಲ್ಲಿ ಓದಲಾದ ದಿ:22–09–2006ರ ಲಿಖಿತ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿಯು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ.

ಈ ಬಗ್ಗೆ ಮೇಲೆ (3)ರಲ್ಲಿ ಓದಲಾದ ದಿ:24–5–2007ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ಹಾಗೂ ಮೇಲೆ (4)ರಲ್ಲಿ ಓದಲಾದ ದಿ:26–6–2007ರ ಅಧಿಸೂಚನೆಯಲ್ಲಿ ಶ್ರೀ ಜೆ.ಆರ್.ರೂಗಿ ರವರ ಅಮಾನತ್ತನ್ನು ರದ್ದುಪಡಿಸಿ ಉಪನಿರ್ದೇಶಕರು ಹಾಗೂ ತಾಂತ್ರಿಕ ಸಹಾಯಕರು, ಬಿಜಾಪುರ ಇಲ್ಲಿಗೆ ಮರುನಿಯುಕ್ತಿಗೊಳಿಸಿದೆ.

ಪ್ರಕರಣದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಮೇಲೆ (6) ರಲ್ಲಿ ಓದಲಾದ ದಿನಾಂಕ 7.12.2007ರ ಸರ್ಕಾರಿ ಆದೇಶದಲ್ಲಿ ಶ್ರೀ ಮುದ್ದುರಂಗಪ್ಪ ಭೂದಾಖಲೆಗಳ ಜಂಟಿ ನಿರ್ದೇಶಕರು, ಪ್ರಸ್ತುತ Deputy Commissioner, Estates, BBMP ರವರನ್ನು ವಿಚಾರಣಾಧಿಕಾರಿಗಳಾಗಿ ಶ್ರೀ ಅಜ್ಜಪ್ಪ, ವಿಚಾರಣಾಧಿಕಾರಿಗಳು, ನಗರ ಮಾಪನ ತಂಡ–3 ಬೆಂಗಳೂರುರವರನ್ನು ಮಂಡನಾಧಿಕಾರಿಗಳಾಗಿ ನೇಮಕ ಮಾಡಲಾಗಿತ್ತು.

ಈ ಬಗ್ಗೆ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (7)ರಲ್ಲಿ ಓದಲಾದ ದಿನಾಂಕ 3.4.2009ರ ತಮ್ಮ ಪತ್ರದೊಡನೆ ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿರುವರು. ವಿಚಾರಣಾ ವರದಿಯಲ್ಲಿ ಒಟ್ಟು ನಾಲ್ಕು ಆರೋಪಗಳ ಪೈಕಿ ಮೂರು ಆರೋಪಗಳು ಸಾಬೀತಾಗಿರುವುದಿಲ್ಲ. ನಾಲ್ಕನೇ ಆರೋಪವು ಭಾಗಶಃ ಸಾಬೀತಾಗಿರುವುದು. ವಿಚಾರಣೆಯನ್ನು ನಿಯಮಾನುಸಾರ ಕೈಗೊಂಡಿದ್ದು ಸಂಬಂಧಿಸಿದ ಸಾಕ್ಷಿಗಳನ್ನು ಪರೀಕ್ಷಿಸಲಾಗಿದೆ. ನಾಲ್ಕನೇ ಆರೋಪಕ್ಕೆ ಸಂಬಂಧಿಸಿದಂತೆ ವಿಚಾರಣಾಧಿಕಾರಿಗಳ ವರದಿಯು ಈ ಕೆಳಗಿನಂತಿರುವುದು.

4ನೇ ಆರೋಪಕ್ಕೆ ಸಂಬಂಧಿಸಿದಂತೆ ಆಪಾದಿತ ಅಧಿಕಾರಿಯು ಒಂದೇ ದಿನದಲ್ಲಿ ಲಿಖಿತ ವಾದವನ್ನು ಪ್ರತಿವಾದಿಯಿಂದ ಪಡೆದು ವಾದಿಗೆ ಲಿಖಿತವಾದ ಸಲ್ಲಿಸಲು 7/9/2004 ಎಂದು ನಿಗದಿಪಡಿಸಿ ಲಿಖಿತ ಹೇಳಿಕೆ ಪಡೆದು ಅದೇ ದಿವಸ ಆದೇಶ ಹೊರಡಿಸಿರುವುದು ಅಧಿಕಾರ ದುರುಪಯೋಗ ಎಂಬ ಅಂಶದ ಬಗ್ಗೆ ಸೂಕ್ಷ್ಮವಾಗಿ ಪರಿಶೀಲಿಸಿದಾಗ, ಕಂದಾಯ ಅಧಿನಿಯಮ ನಿರ್ವಹಿಸಿರುವ ಅರೆ ನ್ಯಾಯಾಂಗಿಕ ಅಧಿಕಾರಿಯಾಗಲಿ, ಯಾವುದೇ ಅಧಿಕಾರಿಯಾಗಲಿ ಸಿ.ಪಿ.ಸಿ ಕಲಂ 54ರ ಪ್ರಕಾರ ಸಿವಿಲ್ ನ್ಯಾಯಾಲಯವು ಅನುಸರಿಸುವ ಕಾರ್ಯವಿಧಾನದಂತೆ ಗರಿಷ್ಟ ಕಾಲಾವಧಿಯನ್ನು ವಾದಿ ಮತ್ತು ಪ್ರತಿವಾದಿಗೆ ನೀಡಬೇಕೆಂದು ಕಾನೂನಿನ ಮೂಲತತ್ವ ಆಗಿರುವುದರಿಂದ ಅದನ್ನು ಯಾವ ಪ್ರಾಧಿಕಾರವು ಉಲ್ಲಂಘಿಸಬಾರದು ಆದರೆ ಆಪಾದಿತ ಅಧಿಕಾರಿಯು ಸಲ್ಲಿಸಿರುವ ಲಿಖಿತ ವಾದದಲ್ಲಿ ನಾನು ಕೇವಲ 31/8/2004ರಂದು ಪ್ರತಿವಾದಿಯವರ ಲಿಖಿತ ವಾದ ಪಡೆದು 7/9/2004 ರಂದು ಲಿಖಿತ ವಾದ ಸಲ್ಲಿಸಲು ಸೂಚಿಸಿರುವುದು ಬಾಧಕರಿಗೆ ಸಂಪೂರ್ಣವಾದ ಅವಕಾಶ ನೀಡಿದಂತೆ ಆಗಲಿಲ್ಲ. ಇಂತಹ ಆಕ್ಷೇಪಣೆ ಅಥವಾ ಕೋರಿಕೆ ಬಂದಾಗ ಮತ್ತೊಂದು ಅವಕಾಶ ನೀಡಿದ್ದರೆ ಅರ್ಹತೆ (Merit)ಬಗ್ಗೆ

ತೀರ್ಮಾನ ಅವರ ವಿರುದ್ಧ ತೆಗೆದುಕೊಂಡಿದ್ದರೂ ಆರೋಪ ಮಾಡಲು ಅವಕಾಶವಿರುತ್ತಿರಲಿಲ್ಲ. ಆದರೂ ಇವರು ನೀಡಿದ ಆದೇಶವನ್ನು ಅಪೀಲು ಪ್ರಾಧಿಕಾರದ ಉಪನಿರ್ದೇಶಕರು ಖಾಯಂಪಡಿಸಿರುವುದರಿಂದ ಮತ್ತು ಲಿಖಿತ ವಾದ ಪಡೆಯಲು ಗರಿಷ್ಠ ಕಾಲಾವಕಾಶ ನೀಡಿಲ್ಲವೆಂಬ ಅಂಶ ಮೇಲ್ನೋಟಕ್ಕೆ ವ್ಯಕ್ತವಾಗಿರುವ ಹಿನ್ನೆಲೆಯಲ್ಲಿ ಭಾಗಶಃ ಸಾಬೀತಾಗಿರುತ್ತದೆ ಎಂದು ಅಭಿಪ್ರಾಯಿಸಲಾಗಿದೆ ಎಂದು ತಿಳಿಸಿದ್ದಾರೆ.

ಈ ಬಗ್ಗೆ ಆರೋಪಿತರಿಗೆ ವಿಚಾರಣಾ ವರದಿಯ ಪ್ರತಿಯೊಂದಿಗೆ ಮೇಲೆ (8) ರಲ್ಲಿ ಓದಲಾದ ದಿನಾಂಕ:13.5.2009ರ ಎರಡನೇ ಕಾರಣ ಕೇಳಿ ನೋಟೀಸ್ ನೀಡಲಾಯಿತು. ಈ ಬಗ್ಗೆ ಜೆ.ಆರ್. ರೂಗಿ ರವರು ದಿನಾಂಕ:.5.2009ರಂದು ಈ ಕೆಳಗಿನಂತೆ ಲಿಖಿತ ಹೇಳಿಕೆ ನೀಡಿರುತ್ತಾರೆ.

> "ಒಟ್ಟಾರೆ ನಾಲ್ಕು ಆಪಾದನೆಗಳನ್ನು ಮಾಡಿದ್ದರೂ ಸಹಿತ ಆಪಾದನೆ ಒಂದೇ ವಿಷಯಕ್ಕೆ ಸಂಬಂಧಿಸಿದ್ದು ಇರುತ್ತದೆ. ವಿಚಾರಣಾಧಿಕಾರಿಗಳು ವರದಿಯನ್ವಯ ಆಪಾದನೆ ನಂ.1ರಿಂದ 3 ಸಾಬೀತಾಗಿರುವುದಿಲ್ಲ ಎಂದು ಸ್ಪಷ್ಟವಾಗಿ ಅಭಿಪ್ರಾಯ ನೀಡಿರುತ್ತಾರೆ. ರಾಜೀನಾಮೆ ಸಹಿತ ನ್ಯಾಯಾಲಯ ಕಡತದ ಒಂದು ಭಾಗವಾಗಿದ್ದು ಅದನ್ನು ಪ್ರತ್ಯೇಕವಾಗಿ ಪರಿಗಣಿಸಲು ಬಾರದು. ಸದರಿ ದಿನಾಂಕ:07.09.2004 ಆದೇಶದ ವಿರುದ್ಧ ಬಾಧಿತರು ಭೂದಾಖಲೆಗಳ ಉಪ ನಿರ್ದೇಶಕರು, ಬೆಳಗಾಂ ಇವರಿಗೆ ನಿಯಮಾನುಸಾರ ಮೇಲ್ಮನವಿ ಸಲ್ಲಿಸಿದ್ದು, ಅದನ್ನು ಮೇಲ್ಮನವಿ ಪ್ರಾಧಿಕಾರವು ತಮ್ಮ ಆದೇಶ ಕ್ರ.ಆರ್.ಟಿ.ಎಸ್.ಎಪಿ 53/04, ದಿನಾಂಕ:7.3.2005ರನ್ವಯ ತಿರಸ್ಕರಿಸಿರುತ್ತದೆ.

ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ಉತ್ತರ ವಲಯ, ಬೆಳಗಾಂ ಇವರು ಆಯುಕ್ತರು ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರಿಗೆ ದಿನಾಂಕ: 26.11.2005ರಂದು ವರದಿ ಸಲ್ಲಿಸಿ ಕಡತವನ್ನು ವಿಲೇಗೆ ಹಾಕಲು ಕೋರಿದ್ದಾರೆ.

ಆಪಾದನೆ ನಂ.1ರಿಂದ 4 ಇವು ಪೂರಕವಾಗಿದ್ದು ಆಪಾದನೆ ನಂ.1ರಿಂದ 3 ಸ್ಥಿರಪಡುವುದಿಲ್ಲವಾಗಿ ವಿಚಾರಣಾಧಿಕಾರಿಗಳು ವರದಿ ಸಲ್ಲಿಸಿದ್ದು ಕಾರಣ ಆಪಾದನೆ ನಂ.4 ಭಾಗಶಃ ಸಾಬೀತಾಗಿರುತ್ತದೆ ಅನ್ನುವ ವಿಚಾರಣಾಧಿಕಾರಿಯವರ ಅಭಿಪ್ರಾಯ ನ್ಯಾಯ ಸಮ್ಮತವಲ್ಲ.

ಪ್ರಸ್ತುತ ಕಡತದಲ್ಲಿ, 4 ಸಲ ಕಡತವನ್ನು ಒಂದಿಲ್ಲ ಒಂದು ಕಾರಣಕ್ಕಾಗಿ ಮುಂದೂಡಲಾಗಿದೆ. ಮೊದಲಿನ 3 ಚೌಕಶಿ ದಿನಾಂಕದಂದು ವಾದಿ ನಂ; 1 ಇವರು ಗೈರು ಹಾಜರು ಉಳಿದಿರುತ್ತಾರೆ. ಅಂತಿಮವಾಗಿ ದಿನಾಂಕ: 31.08.2004 ರಂದು ಕಡತ ವಿಚಾರಣೆ ಪೂರ್ತಿಗೊಳಿಸಿ ಕಡತವನ್ನು ಆದೇಶಕ್ಕಾಗಿ ದಿನಾಂಕ:7.9.2004ಕ್ಕೆ ಮುಂದೂಡಲಾಯಿತು. ಈ ಹಂತದಲ್ಲಿ ವಾದಿ ನಂ.1 ಪರ ನ್ಯಾಯವಾದಿಗಳು ಹಾಜರಾಗಿದ್ದು ಕಡತವನ್ನು ಆದೇಶಕ್ಕಾಗಿ ದಿನಾಂಕ:7.9.2004 ನಿಗದಿಪಡಿಸಿದ್ದು ಕಾರಣ ದಿನಾಂಕ:7.9.2004ರ ಒಳಗಾಗಿ ಲಿಖಿತ ಹೇಳಿಕೆ ಸಲ್ಲಿಸಲು ಅವರಿಗೆ ತಿಳಿಸಿ ರೋಜನಾಮೆ ಮೇಲೆ ವಾದಿ ನಂ.1 ಪರ ನ್ಯಾಯವಾದಿಗಳ ಹಾಗೂ ಹಾಜರಿದ್ದ ಇನ್ನಿತರ ನ್ಯಾಯವಾದಿಗಳ, ಪಕ್ಷಗಾರರ ರುಜು ಪಡೆಯಲಾಗಿದೆ.

ವಿಚಾರಣಾಧಿಕಾರಿಗಳು, ಸಿವಿಲ್ ಪ್ರೊಸಿಜರ್ ಕೋಡ್ ಕಲಂ 54 ನೇದ್ದರನ್ವಯ ಕ್ರಮ ಜರುಗಿಸಿಲ್ಲ. ಕಾರಣ ಆಪಾದನೆ ನಂ.4 ಭಾಗಶಃ ಸ್ಥಿರಪಡುವುದಾಗಿ ವ್ಯಕ್ತಪಡಿಸಿದ ಅಭಿಪ್ರಾಯ ಕಾನೂನಿಗೆ ವ್ಯತಿರಿಕ್ತವಾಗಿರುತ್ತದೆ.

ಕರ್ನಾಟಕ ಶ್ರೇಷ್ಠ ನ್ಯಾಯಾಲಯದ ದ್ವಿಪೀಠ ನ್ಯಾಯಮೂರ್ತಿಗಳು ಆದೇಶ ಮಾಡಿದ್ದು ಅದು 2004(4) KAR.L.J.189 (DB) ನೇದ್ದರಲ್ಲಿ ಮಾನ್ಯ ನ್ಯಾಯಾಲಯದ ಆದೇಶದನ್ವಯ Once case has been finally heard posted for judgement nothing is required to be done except to pronounce judgement RTS/SR:4/04-05 ಎಂದು ವರದಿಯಾಗಿದೆ. ಅದರಂತೆ ಆದೇಶಕ್ಕಾಗಿ 7–9–2004 ರಂದು ದಿನಾಂಕ ನಿಗದಿಪಡಿಸಲಾಗಿತ್ತು. ಮಾನ್ಯ ಶ್ರೇಷ್ಠ ನ್ಯಾಯಾಲಯದ ಆದೇಶದನ್ವಯ ನಾನು ಕ್ರಮ ಜರುಗಿಸಬೇಕಾದ ಕ್ರಮ ಏನೆಂದರೆ ದಿನಾಂಕ:7–9–2004 ರಂದು ಆದೇಶ ಮಾಡಲೇಬೇಕಾಗಿತ್ತು ಹಾಗೂ ಅದರನ್ವಯ ಆದೇಶ ಮಾಡಲಾಗಿದೆ.

ನಾನು ಮಾಡಲಾದ ಆದೇಶ ಸಿವಿಲ್ ಪ್ರೊಸಿಜರ್ ಕೋಡ್ 1908 ನೇದ್ದನ್ನು 1999 ರಲ್ಲಿ ತಿದ್ದುಪಡಿ ಮಾಡಿದ್ದು, ಮಾಡಲಾದ ತಿದ್ದುಪಡಿಯನ್ವಯ, ಅರ್ಜುನಸಿಂಗ್ ಕಡತದಲ್ಲಿ ಮಾನ್ಯ ಸರ್ವೋಚ್ಛ ನ್ಯಾಯಾಲಯವು ನೀಡಿದ ನಿರ್ದೇಶನಗಳು ಹಾಗೂ ಮಾನ್ಯ ಉಚ್ಛ ನ್ಯಾಯಾಲಯವು ದ್ವಿಪೀಠದಲ್ಲಿ ದಿನಾಂಕ 5.4.2004ರಂದು ನೀಡಿದ ಆದೇಶಕ್ಕೆ ಅನುಗುಣವಾಗಿ ಇರುತ್ತದೆ. ಒಂದು ವೇಳೆ ವಿಚಾರಣಾಧಿಕಾರಿಗಳ ಅಭಿಪ್ರಾಯದನ್ವಯ ಮತ್ತೊಂದು ಅವಕಾಶ ನೀಡಿದ್ದಲ್ಲಿ ಅದು ಸರ್ವೋಚ್ಛ ನ್ಯಾಯಾಯಲಯದ ಹಾಗೂ ಶ್ರೇಷ್ಠ ನ್ಯಾಯಾಲಯದ ಆದೇಶಕ್ಕೆ ವ್ಯತಿರಿಕ್ತ ಆಗುತ್ತಿತ್ತು. ಸಾಮಾನ್ಯವಾಗಿ ಇಂದಿನ ದಿನಗಳಲ್ಲಿ, ಯಾರ ವಿರುದ್ಧ ಕ್ರಮ ಜರುಗಿಸಲಾಗಿದೆಯೇ ಅಂತಹವರು ಆಪಾದನೆ ಮಾಡುವುದು ಸಾಮಾನ್ಯವಾಗಿದೆ. ಕಾರಣ ಇನ್ನೊಂದು ಅವಕಾಶ ನೀಡಿದ್ದಲ್ಲಿ, ಆರೋಪ ಮಾಡಲು ಅವಕಾಶ ಇರುತ್ತಿರಲಿಲ್ಲ ಅನ್ನುವ ವಿಚಾರಣಾಧಿಕಾರಿಗಳ ಅಭಿಪ್ರಾಯ ಒಪ್ಪಿವುದು ನ್ಯಾಯಸಮ್ಮತವಲ್ಲ. ಆದುದರಿಂದ ಮೇಲೆ ವಿವರಿಸಿದ ಕಾರಣಗಳಿಗಾಗಿ ಆಪಾದನೆ ನಂ.4ನೇದ್ದರಲ್ಲಿ ಸಹಿತ ದೋಷಮುಕ್ತಗೊಳಿಸಲು ಕೋರಿದ್ದಾರೆ.

ಮೇಲ್ಕಂಡ ವಿವರಗಳ ಹಿನ್ನೆಲೆಯಲ್ಲಿ ಅಧಿಕಾರಿಯವರು ದಿನಾಂಕ 7.9.2004ರಂದು ಮೃತ್ಯು ಪತ್ರದ ಆಧಾರದ ಮೇರೆಗೆ ವಿಚಾರಣೆ ನಡೆಸಿ ಪ್ರತಿವಾದಿ ಪರವಾಗಿ ಹೆಸರು ದಾಖಲು ಮಾಡಿ ಆದೇಶ ಮಾಡಿದ್ದು, ಈ ಆದೇಶದ ವಿರುದ್ಧ ಬಾಧಿತರು ಭೂದಾಖಲೆಗಳ ಉಪನಿರ್ದೇಶಕರು, ಬೆಳಗಾಂ ಇವರಿಗೆ ಮೇಲ್ಮನವಿ ಸಲ್ಲಿಸಿದ್ದು, ಮೇಲ್ಮನವಿ ಪ್ರಾಧಿಕಾರವು ಮೇಲ್ಮನವಿಯನ್ನು ತಿರಸ್ಕರಿಸಿ, ಅಧಿಕಾರಿಯವರು ಮಾಡಿದ ಆದೇಶ ದಿನಾಂಕ 7.9.2004ನ್ನು ಎತ್ತಿ ಹಿಡಿದಿರುವುದು ಹಾಗೂ ಅಧಿಕಾರಿಯವರು ದಿನಾಂಕ: 31.8.2004ರಂದು ವಾದಿ ಮತ್ತು ಪ್ರತಿವಾದಿಗೆ ದಿನಾಂಕ 7.9.2004ರ ಒಳಗಾಗಿ ಲಿಖಿತ ಹೇಳಿಕೆ ಸಲ್ಲಿಸಲು ಅವಕಾಶ ಮಾಡಿಕೊಟ್ಟಿರುವರು. ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ವಾದಿಯಿಂದ ಲಿಖಿತವಾದ ಪಡೆಯಲು ಗರಿಷ್ಠ ಕಾಲಾವಧಿ ನೀಡಿಲ್ಲವೆಂಬ ಅಂಶ ಸಾಬೀತಾಗಿದ್ದುದರಿಂದ ಇದೊಂದು ಕಾರ್ಯವಿಧಾನದ ಲೋಪವಾಗಿರುವುದು ಕಂಡುಬರುವುದು. ಅಧಿಕಾರಿಯವರು ಕಾಲಾವಕಾಶ ಕೊಟಿದ್ದು ಆದರೆ ಸಾಕಷ್ಟು ಕಾಲಾವಕಾಶ ನೀಡಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ಪಟ್ಟಿರುವುದು,. ಒಂದಲ್ಲ ಒಂದು ಕಾರಣದಿಂದ ವಿಚಾರಣೆ ಮುಂದೂಡುತ್ತಾ ಹೋಗಿದ್ದರಿಂದ ಪ್ರಕರಣವನ್ನು ಬೇಗ ಇತ್ಯರ್ಥಪಡಿಸಬೇಕೆಂಬ ಸದುದ್ದೇಶದಿಂದ ಅರೆ ನ್ಯಾಯಿಕ ಅಧಿಕಾರಿಯಿಂದ ಶ್ರೀ ಜೆ.ಆರ್. ರೂಗಿ ರವರು ಒಂದು ವಾರ ಕಾಲಾವಕಾಶ ನೀಡಿರುವುದು ಕಂಡುಬರುತ್ತದೆ. ಮೇಲಾಗಿ ಇವರು ಮಾಡಿದ ಆದೇಶವನ್ನು ಮೇಲ್ಮನವಿ ಪ್ರಾಧಿಕಾರದ ಮುಂದೆ ಪ್ರಶ್ನಿಸಿದ್ದು ಸದರಿ ಮೇಲ್ಮನವಿ ಪ್ರಾಧಿಕಾರವು ಅಧಿಕಾರಿಯವರು ದಿನಾಂಕ 7.9.2004ರಂದು ಮಾಡಿದ ಆದೇಶವನ್ನು ಎತ್ತಿ ಹಿಡಿಯಲಾಗಿದೆ. ಇದರಿಂದಾಗಿ ಅಧಿಕಾರಿಯವರು ಆದೇಶ ಮಾಡುವಲ್ಲಿ ಯಾವುದೇ ತಪ್ಪನ್ನು ಎಸಗಿರುವುದು ಕಂಡುಬರುವುದಿಲ್ಲ. ಆದಾಗ್ಯೂ ಅಧಿಕಾರಿಯವರು ವಾದಿಗೆ ಸಾಕಷ್ಟು ಕಾಲಾವಕಾಶ ನೀಡಿಲ್ಲವೆಂಬ ಅಂಶವು ವಿಚಾರಣೆಯಲ್ಲಿ ಸಾಕ್ಷ್ಯಾಧಾರಗಳಿಂದ ಸಾಬೀತಾಗಿರುವ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿ ಸರ್ಕಾರವು ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 19 ಭೂದಾಸೇ (1) 2007, ಬೆಂಗಳೂರು, ದಿನಾಂಕ: 6ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(11) ರ ಪ್ರಕಾರ ಸರ್ಕಾರವು ಆರೋಪಿತ ಅಧಿಕಾರಿಗಳಾದ ಶ್ರೀ ಜೆ.ಆರ್. ರೂಗಿ ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪನಿರ್ದೇಶಕರು, ಬಿಜಾಪುರರವರಿಗೆ ವಾಗ್ದಂಡನೆ (Censure) ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2408

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ)

**ವಿಷಯ:** 2009–10ನೇ ಸಾಲಿನಲ್ಲಿ ಭಾರಿ ಮಳೆಯಿಂದ ಆಗಿರುವ ಹಾನಿಗಳಿಗೆ ತುರ್ತು ಪರಿಹಾರ ಕ್ರಮ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಶಿವಮೊಗ್ಗ ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರ ಸಂಖ್ಯೆ:ಎ–3 ಸಿಎಎಲ್.ಸಿಆರ್ 90/2009–10, ದಿ:05–10–2009.

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ಬಿದ್ದ ಬಾರಿ ಮಳೆಯಿಂದ ಉಂಟಾಗಿ ಶಿವಮೊಗ್ಗ ಜಿಲ್ಲೆಯಲ್ಲಿ ಮಾನವ ಜೀವಹಾನಿ, ಜಾನುವಾರು ಹಾನಿ, ಮನೆಹಾನಿ, ಬೆಳೆ ಹಾನಿ ಹಾಗೂ ಮೂಲಭೂತ ಸೌಕರ್ಯಗಳಿಗೆ ಹಾನಿ ಉಂಟಾಗಿರುವುದಕ್ಕೆ ತುರ್ತು ಪರಿಹಾರ ಕಾರ್ಯಕೈಗೊಳ್ಳಲು ಮೇಲೆ ಓದಲಾದ ಪತ್ರದಲ್ಲಿ ಶಿವಮೊಗ್ಗ ಜಿಲ್ಲಾಧಿಕಾರಿಗಳು, ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಜಿಲ್ಲಾಧಿಕಾರಿಗಳ ಕೋರಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಹಣ ಬಿಡುಗಡೆ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 137 ಟಿಎನ್ಆರ್ 2009, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮಳೆಯಿಂದ ಆಗಿರುವ ಹಾನಿಗಳಿಗೆ ತುರ್ತು ಪರಿಹಾರ ಕಾರ್ಯಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ಕಾರ್ಯಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಶಿವಮೊಗ್ಗ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ರೂ.500.00 ಲಕ್ಷ (ರೂ.ಐದುನೂರು ಲಕ್ಷಗಳು ಮಾತ್ರ) ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

1) ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಈ ಕೆಳಕಂಡಂತೆ ಆದ್ಯತೆಯ ಮೇರೆಗೆ ಉಪಯೋಗಿಸುವುದು.

a) ಮಾನವ/ ಪ್ರಾಣಿ ಜೀವಹಾನಿ

b) ಮನೆ ಹಾನಿ

c) ಬೆಳೆ ಹಾನಿ

d) ಹಾನಿಗೊಳಗಾದ ಮೂಲಭೂತ ಸೌಕರ್ಯಗಳಿಗೆ ತುರ್ತು ರಿಪೇರಿ.

e) ಕುಡಿಯುವ ನೀರಿನ ವ್ಯವಸ್ಥೆ.

f) ಜಾನುವಾರುಗಳ ಸಂರಕ್ಷಣೆ

2) ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು.

3) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಸಿಆರ್‌ಎಫ್/ಎನ್‌ಸಿಸಿಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ. ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

4) ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್ ಪಿ.ಡಿ.ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–01–102–0–00–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 692 ವೆಚ್ಚ–7/2009 ದಿನಾಂಕ: 10–09–2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರಾಮಚಂದ್ರಯ್ಯ**

ಪಿ.ಆರ್. 2410

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

**ವಿಷಯ:** ಬೆಂಗಳೂರು ನಗರ ಜಿಲ್ಲೆಯ 11 ಉಪ ನೋಂದಣಿ ಕಚೇರಿಗಳಲ್ಲಿನ 1995–96ರಿಂದ 2003–2004ನೇ ಸಾಲಿನ ಇಂಡೆಕ್ಸ್–II ರಿಜಿಸ್ಟರ್‌ಗಳಲ್ಲಿನ ನಮೂದನೆಗಳನ್ನು ಸ್ಕ್ಯಾನ್ ಹಾಗೂ ಡಾಟಾ ಎಂಟ್ರಿ ಮಾಡಿಸುವ ಕುರಿತು.

**ಓದಲಾಗಿದೆ:** ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ. Comp 21/2002–03 ದಿನಾಂಕ 28.07.2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 28.07.2009ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು, ಸರ್ಕಾರದ ಆದೇಶ ಸಂಖ್ಯೆ ಕಂಇ 281 ಮುನೋಮು 2004, ದಿನಾಂಕ: 14.07.2000ರನ್ವಯ ಭಾರತ ಸರ್ಕಾರವು 11ನೇ ಆರ್ಥಿಕ ಆಯೋಗದ ಅನುದಾನದಿಂದ ಕೆಳಕಂಡ ಯೋಜನೆಗಳಿಗಾಗಿ ಒಟ್ಟು ರೂ.3 ಕೋಟಿ ವೆಚ್ಚದ ವಿನಿಯೋಗಕ್ಕಾಗಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

| | | |
|---|---|---|
| 1 | For Data Entry Encumbrance Checking in respect of 12 Sub Registrars Offices in Bangalore District. | Rs.100.00 lakhs |
| 2 | Development of Encumbrance Software Module | Rs.50.00 lakhs |
| 3 | Network Build up between Sub-Registrar Offices in the State. | Rs.40.00 lakhs |
| 4 | Payment to C-DAC for KAVERI Software | Rs.110.00 lakhs |
| | **Total** | **Rs.300.00lakhs** |

ದಿನಾಂಕ: 04–06–2004ರಂದು ಜರುಗಿದ ತಾಂತ್ರಿಕ ಸಲಹಾ ಸಮಿತಿ ಸಭೆಯಲ್ಲಿ ಮೆ:ಸಿ–ಡಾಕ್ ಪುಣೆಯವರು ಋಣಭಾರ ಪ್ರಮಾಣ ಪತ್ರ ನೀಡಿಕೆ ತಂತ್ರಾಂಶ ತಯಾರಿಕೆಗೆ ಸಂಬಂಧಿಸಿದ ಎಸ್‌ಆರ್‌ಎಸ್ ದಸ್ತಾವೇಜಿಗೆ ಅನುಮೋದನೆ ನೀಡಲಾಗಿದೆ. ಸದರಿ ತಂತ್ರಾಂಶದ ತಯಾರಿಕೆಗಾಗಿ ರೂ.15,00,000/– ವನ್ನು ಮೆ:ಸಿ–ಡಾಕ್ ಸಂಸ್ಥೆಗೆ ಪಾವತಿಸಲಾಗಿದೆ. ಬಸವನಗುಡಿ ಉಪನೋಂದಣಿ ಕಚೇರಿಯ ಋಣಭಾರ ಪ್ರಮಾಣ ಪತ್ರದ ನೀಡಿಕೆಗೆ ಸಂಬಂಧಿಸಿದ ಭೌತಿಕ ದಾಖಲಾತಿಗಳ ಡಾಟಾ–ಎಂಟ್ರಿಗಾಗಿ (1981–82 ರಿಂದ 2003–04ರ ಅವಧಿ) ರೂ.9,83,654/– ಗಳನ್ನು ವೆಚ್ಚ ಮಾಡಲಾಗಿದೆ. ಕಾವೇರಿ ತಂತ್ರಾಂಶ ಅಭಿವೃದ್ಧಿಗಾಗಿ ರೂ.1,10,10,000/– ಗಳನ್ನು ಮೆ:ಸಿ–ಡಾಕ್ ಸಂಸ್ಥೆಗೆ ಪಾವತಿಸಲಾಗಿದೆ. ಬೆಂಗಳೂರಿನ ಉಪ

ನೋಂದಣಿ ಹಾಗೂ ಜಿಲ್ಲಾ ನೋಂದಣಿ ಕಚೇರಿ ಮತ್ತು ಕೇಂದ್ರ ಕಚೇರಿಗೆ ನೆಟ್‌ವರ್ಕ್ ಸ್ಥಾಪಿಸಲು ರೂ.16,65.764/– ಗಳು ವೆಚ್ಚ ಮಾಡಲಾಗಿದೆ. ಒಟ್ಟು ರೂ.3.00 ಕೋಟಿ ಅನುದಾನದಲ್ಲಿ ಈವರೆಗೆ ಒಟ್ಟು ರೂ. 1,51,59,418/–ಗಳನ್ನು ವೆಚ್ಚ ಮಾಡಲಾಗಿದ್ದು, ರೂ.10,91,000/– ಉಳಿದಿರುತ್ತದೆ. ಋಣಭಾರ ಪ್ರಮಾಣ ಪತ್ರ ಯೋಜನೆಗಾಗಿ ರೂ.1,37,49,582/– ಮೆ: ಸಿ–ಡಾಕ್ ಪುಣೆಯವರಲ್ಲಿ ಜಮಾ ಇರುತ್ತದೆ.

ಬೆಂಗಳೂರು ನಗರದ 12 ಉಪನೋಂದಣಿ ಕಚೇರಿಗಳ ಪೈಕಿ ಬಸವನಗುಡಿ ಉಪನೋಂದಣಿ ಕಚೇರಿಯ ಡಾಟಾ–ಎಂಟ್ರಿ ಪೂರ್ಣಗೊಂಡಿರುತ್ತದೆ. ಉಳಿದ 11 ಉಪ ನೊಂದಣಿ ಕಚೇರಿಗಳ ಇಂಡೆಕ್ಸ್-II ರಿಜಿಸ್ಟರ್‌ಗಳ ಡಾಟಾ–ಎಂಟ್ರಿ ಕಾರ್ಯ ಪೂರ್ಣಗೊಳಿಸುವುದು ಬಾಕಿ ಇರುತ್ತದೆ. ಸದರಿ ಕಾರ್ಯಕ್ಕಾಗಿ ಏಪ್ರಿಲ್ 2006 ಹಾಗೂ ಡಿಸೆಂಬರ್ 2006ರಲ್ಲಿ ಒಟ್ಟು 2 ಬಾರಿ ಟೆಂಡರ್ ಕರೆದರೂ ಯಾವೊಬ್ಬ ಬಿಡ್‌ದಾರರು ಬಿಡ್ ಸಲ್ಲಿಸದಿದ್ದುದರಿಂದ ಸದರಿ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿರುವುದಿಲ್ಲ. ಋಣಭಾರ ಪ್ರಮಾಣ ಪತ್ರ ಡಾಟಾ–ಎಂಟ್ರಿ ಯೋಜನೆಗಾಗಿ RPF ದಸ್ತಾವೇಜನ್ನು M/s PWC ತಂತ್ರಜ್ಞರು ತಯಾರಿಸಿಕೊಟ್ಟಿದ್ದು ಬಾಕಿ ಇರುವ 11 ಉಪ ನೋಂದಣಿ ಕಚೇರಿಗಳಲ್ಲಿನ ಇಂಡೆಕ್ಸ್–II ರಿಜಿಸ್ಟರ್‌ನ ನಮೂದನೆಗಳನ್ನು ಸ್ಕ್ಯಾನ್ ಹಾಗೂ ಡಾಟಾ–ಎಂಟ್ರಿ ಮಾಡಲು ಉದ್ದೇಶಿಸಲಾಗಿದ್ದು, ಮೆ:ಸಿ–ಡಾಕ್ ಪುಣೆರವರು ತಯಾರಿಸಿಕೊಟ್ಟ E.C.Module ತಂತ್ರಾಂಶವನ್ನು ಈ ಯೋಜನೆಗಾಗಿ ಉಪಯೋಗಿಸಲಾಗುವುದು. ಸದರಿ ಯೋಜನೆಗೆ ಒಟ್ಟು ರೂ.1,15,48,609/– ವೆಚ್ಚವಾಗಬಹುದೆಂದು ಅಂದಾಜಿಸಲಾಗಿದೆ. ಸದರಿ ವೆಚ್ಚವನ್ನು ಮೆ:ಸಿ–ಡಾಕ್ ಪುಣೆಯವರಲ್ಲಿ ಜಮಾ ಇರುವ ಭಾರತ ಸರ್ಕಾರದ 11ನೇ ಆರ್ಥಿಕ ಆಯೋಗದ ಅನುದಾನದಲ್ಲಿ ಬಿಡುಗಡೆಗೊಳಿಸಲಾಗಿರುವ ರೂ.1,37,49,582/– ಗಳಿಂದ ಭರಿಸಲಾಗುವುದು.

RPF ವರದಿ ಆಧರಿಸಿ ಟೆಂಡರ್ ಕರೆಯಬೇಕಾಗಿರುವುದರಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಪ್ರಕಾರ ಟೆಂಡರ್ ಪ್ರಕ್ರಿಯೆಗಾಗಿ ಸಮಿತಿ ಹಾಗೂ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ.

**1) ಟೆಂಡರ್ ಪ್ರಕ್ರಿಯೆಗಾಗಿ ನೇಮಿಸಬೇಕಾಗಿರುವ ಅಧಿಕಾರಿಗಳು/ಪ್ರಾಧಿಕಾರಗಳು**

| Sl. No. | Authority or Committee | Name of the officer or office |
|---|---|---|
| 1 | Procurement Entity [(Sec2(d)] | Department of Stamps & Registration |
| 2 | Tender Inviting and project implementing Authority [(Sec2(i)] | C-DAC pune |
| 3 | Tender Accepting Authority [(Sec2(i) | Inspector General of Registration & Commissioner or Stamps, Bangalore |
| 4 | Tender Bulletin Officer [(Sec2(k)] | Deputy Secretary Revenue Department (Stamps & Rgn) |
| 5 | Tender Scrutiny Committee (Sec 10)] | Tender Accepting Authority may constitute a Tender Scrutiny Committee Constituting such persons as it deems scrutinize tenders. |

**2) ಟೆಂಡರ್ ಪರಿಶೀಲನಾ ಸಮಿತಿ**

| ಕ್ರ. ಸಂ. | ಹೆಸರು | ಸಮಿತಿಯಲ್ಲಿ ಪದನಾಮ |
|---|---|---|
| 1 | ನೊಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು | ಅಧ್ಯಕ್ಷರು |
| 2 | ಉಪ–ನೋಂದಣಿ ಮಹಾಪರಿವೀಕ್ಷಕರು (ಆಡಳಿತ ಮತ್ತು ಕಾನೂನು) | ಸದಸ್ಯ ಕಾರ್ಯದರ್ಶಿ |
| 3 | ಉಪ–ನೋಂದಣಿ ಮಹಾಪರಿವೀಕ್ಷಕರು (ಗುಪ್ತದಳ) | ಸದಸ್ಯರು |
| 4 | ಸಹಾಯಕ–ನೋಂದಣಿ ಮಹಾಪರಿವೀಕ್ಷಕರು (ಆಡಿಟ್) | ಸದಸ್ಯರು |
| 5 | ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಆಡಳಿತ) | ಸದಸ್ಯರು |
| 6 | ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಗಣಕೀಕರಣ) | ಸದಸ್ಯರು |
| 7 | ಸಹಾಯಕ ನೋಂದಣಿ ಮಹಾಪರಿವೀಕ್ಷಕರು ಕಾನೂನು ಅಧಿಕಾರಿ (ಕೇಂದ್ರ ಕಚೇರಿ) | ಸದಸ್ಯರು |
| 8 | ಶ್ರೀ ಗಂಗಾಧರ ದಾಟನಾಳ Sr. Programmer ಇ –ಆಡಳಿತ ಸಚಿವಾಲಯ | ಸದಸ್ಯರು |
| 9 | ಡೈರೆಕ್ಟರ್ NIC ಅಥವಾ ಅವರ ಪದಾಧಿಕಾರಿಗಳು | ಸದಸ್ಯರು |

| ಕ್ರ. ಸಂ. | ಹೆಸರು | ಸಮಿತಿಯಲ್ಲಿ ಪದನಾಮ |
|---|---|---|
| 10 | ಪ್ರೋಗ್ರಾಮ್ ಕೋ ಅರ್ಡಿನೇಟರ್ C-DAC ಪುಣೆ | ಸದಸ್ಯರು |
| 11 | ಜಿಲ್ಲಾ ನೋಂದಣಾಧಿಕಾರಿ, ಗಾಂಧಿನಗರ | ಸದಸ್ಯರು |
| 12 | ಉಪ ಕಾರ್ಯದರ್ಶಿಗಳು, ಕಂದಾಯ ಇಲಾಖೆ (ನೋಂದಣಿ) | ಸದಸ್ಯರು |

ಟೆಂಡರ್ ಅಧಿಕಾರಿ/ಪ್ರಾಧಿಕಾರಗಳನ್ನು ಹಾಗೂ ಟೆಂಡರ್ ಪರಿಶೀಲನಾ ಸಮಿತಿಯನ್ನು ಮತ್ತು RFP ಕರಡು ಪ್ರತಿಯನ್ನು ಅನುಮೋದಿಸಲು ಹಾಗೂ ಈ ಯೋಜನೆಯನ್ನು ಮೆ:ಸಿ–ಪುಣೆಯವರ ಮುಖಾಂತರ ಕಾರ್ಯಗತಗೊಳಿಸುವುದಕ್ಕೆ ಅನುಮತಿ ನೀಡುವಂತೆ ಕೋರಲಾಗಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 139 ಮುನೋಮು 2009, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2009**

ಸರ್ಕಾರವು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯು ಬೆಂಗಳೂರು ನಗರ ಜಿಲ್ಲೆಯ 11 ಉಪ ನೋಂದಣಿ ಕಚೇರಿಗಳಲ್ಲಿನ 1995–96 ರಿಂದ 2003–04ನೇ ಸಾಲಿನ ಇಂಡೆಕ್ಸ್–II ರಿಜಿಸ್ಟಾರ್‌ಗಳಲ್ಲಿನ ನಮೂದನೆಗಳನ್ನು ಸ್ಕ್ಯಾನ್ ಹಾಗೂ ಡಾಟಾ ಎಂಟ್ರಿ ಮಾಡಿಸಲು RFP ಕರಡು ಪ್ರತಿಗೆ ಅನುಮೋದನೆ ನೀಡಿದೆ.

RFP ವರದಿ ಆಧಾರಿಸಿ ಟೆಂಡರ್ ಕರೆಯಬೇಕಾಗಿರುವುದರಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಪ್ರಕಾರ ಟೆಂಡರ್ ಪ್ರಕ್ರಿಯೆಗಾಗಿ ಟೆಂಡರ್ ಅಧಿಕಾರಿ/ ಪ್ರಾಧಿಕಾರಗಳನ್ನು ನೇಮಕ ಮಾಡಲು ಹಾಗೂ ಟೆಂಡರ್ ಪರಿಶೀಲನಾ ಸಮಿತಿಯನ್ನು ರಚಿಸಲು ಅನುಮೋದನೆ ನೀಡಿದೆ.

ಈ ಯೋಜನೆಯನ್ನು ಮೆ:ಸಿ.ಡಾಕ್ ಪುಣೆಯವರ ಮುಖಾಂತರ ಕಾರ್ಯಗತಗೊಳಿಸುವುದಕ್ಕೆ ಹಾಗೂ ಈ ಕುರಿತು ತಗಲುವ ರೂ.1,15,48,609/–ಗಳ ಅಂದಾಜು ವೆಚ್ಚವನ್ನು ಮೆ:ಸಿ–ಡಾಕ್ ಪುಣೆಯವರಲ್ಲಿ ಜಮಾ ಇರುವ ಭಾರತ ಸರ್ಕಾರದ 11ನೇ ಆರ್ಥಿಕ ಆಯೋಗದ ಅನುದಾನದಲ್ಲಿ ಬಿಡುಗಡೆಗೊಳಿಸಲಾಗಿರುವ ರೂ. 1,37,49,582/–(ಒಂದು ಕೋಟಿ ಮೂವತ್ತೇಳು ಲಕ್ಷ ನಲವತ್ತೊಂಬತ್ತು ಸಾವಿರದ ಐನೂರ ಎಂಬತ್ತೆರಡು ರೂಪಾಯಿಗಳು ಮಾತ್ರ) ಗಳಿಂದ ಭರಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ರಾಮಚಂದ್ರ**

ಪಿ.ಆರ್. 2411

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೊಂದಣಿ ಮತ್ತು ಮುದ್ರಾಂಕ)

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ:** 2009–10ನೇ ಶೈಕ್ಷಣಿಕ ಸಾಲಿನಿಂದ ಶ್ರೀ ದಿವ್ಯ ಬಿ.ಇಡಿ.ಕಾಲೇಜು, ರಿಂಗ್ ರಸ್ತೆ ಹತ್ತಿರ, ಸದಾಶಿವನಗರ, ತುಮಕೂರು, ಈ ಸಂಸ್ಥೆಯ ಬಿ.ಇಡಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ ಬಗ್ಗೆ

**ಉಲ್ಲೇಖ:** 1. ಕರ್ನಾಟಕ ಸರ್ಕಾರದ ನಡವಳಿ ಸಂಖ್ಯೆ:ಇಡಿ 138 ಯುಆರ್‌ಸಿ 2007, ದಿ:23–10–2007

2. ಎನ್.ಸಿ.ಟಿ.ಇ. ಪತ್ರ ಸಂಖ್ಯೆ F.SRC/NCTE/B.Ed./2009/13349 ದಿನಾಂಕ:1–6–2009

3. ಸಂಸ್ಥೆಯ ಕಾರ್ಯದರ್ಶಿಗಳ ಪತ್ರ ದಿನಾಂಕ: 19–6–2009

**ಪ್ರಸ್ತಾವನೆ:**

ಸರ್ಕಾರಿ/ ವಿಶ್ವವಿದ್ಯಾಲಯ/ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಇಪಿ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಪಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಾಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಶ್ರೀ ದಿವ್ಯ ಎಜುಕೇಶನ್ ಸೊಸೈಟಿ, ರಿಂಗ್ ರಸ್ತೆ ಹತ್ತಿರ, ಸದಾಶಿವನಗರ, ತುಮಕೂರು, ಈ ಸಂಸ್ಥೆಯ ಶ್ರೀ ದಿವ್ಯ ಬಿ.ಇಡಿ. ಕಾಲೇಜನ್ನು ರಿಂಗ್ ರಸ್ತೆ, ಹತ್ತಿರ, ಸದಾಶಿವನಗರ, ತುಮಕೂರು, ಇಲ್ಲಿ ಬಿ.ಇಡಿ. ಕೋರ್ಸಿನೊಂದಿಗೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ಆದೇಶದಲ್ಲಿ ಎನ್.ಸಿ.ಟಿ.ಇ ಸದರಿ ಕಾಲೇಜಿನ ಬಿ.ಇಡಿ.ಕೋರ್ಸಿಗೆ 2009–10ನೇ ಸಾಲಿನಿಂದ ಅನ್ವಯವಾಗುವಂತೆ 100(ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು/ಕಾರ್ಯದರ್ಶಿಗಳು ತಮ್ಮ ಕಾಲೇಜಿನಲ್ಲಿ

ಬಿ.ಇಡಿ.ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 60 ಯುಟಿಟಿ 2009, ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2009**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದಡಿ ಓದಲಾದ ಕರ್ನಾಟಕ ಬಿ.ಇಡಿ/ಬಿ.ಪಿ.ಇಡಿ ಕೋರ್ಸಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ದಿವ್ಯ ಬಿ.ಇಡಿ. ಕಾಲೇಜು, ರಿಂಗ್ ರಸ್ತೆ, ಹತ್ತಿರ, ಸದಾಶಿವನಗರ, ತುಮಕೂರು, ಈ ವಿದ್ಯಾಸಂಸ್ಥೆಯ ಬಿ.ಇಡಿ. ಕೋರ್ಸಿಗೆ 2009–10ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2413

**ಬಿ.ಎಸ್. ಜಾಪಾಲಿ**

ಸರ್ಕಾರದ ಉಪ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಆರ್.ನಾಗರಾಜು, ದ್ವಿ.ದ.ಸ ಜಿಲ್ಲಾ ಪೊಲೀಸ್ ಕಚೇರಿ, ತುಮಕೂರುರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ

**ಓದಲಾಗಿದೆ:**
1) ಜಿಲ್ಲಾ ಪೊಲೀಸ್ ಕಚೇರಿ, ತುಮಕೂರು ರವರ ದೋಷಾರೋಪಣಾ ಪಟ್ಟಿ ದಿನಾಂಕ: 16–02–2006
2) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರುರವರು ಇಲಾಖಾ ವಿಚಾರಣೆಯಲ್ಲಿ ಹೊರಡಿಸಿರುವ ಅಂತಿಮ ಆದೇಶ ಸಂಖ್ಯೆ: ಪನ್ನಿ ಡಿಇ/13/2005–06 ಓಬಿ/465/2007 ದಿನಾಂಕ:09–10–2007
3) ಶ್ರೀ ನಾಗರಾಜ, ದ್ವಿ.ದ.ಸರವರ ಮೇಲ್ಮನವಿ ಅರ್ಜಿ ದಿನಾಂಕ 28–12–2007
4) ಮೇಲ್ಮನವಿ ಪ್ರಾಧಿಕಾರಿಯ ಆದೇಶ ಸಂಖ್ಯೆ: ಅಪೀಲು/37/2007–08 ಓಬಿ 16/2008–09 ದಿನಾಂಕ:26–04–2008
5) ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ದಿನಾಂಕ 04–12–2008
6) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 87 ಸಿಎನ್‌ಎಸ್ 2009 ದಿನಾಂಕ:19–08–2009

**ಪ್ರಸ್ತಾವನೆ:**

ಶ್ರೀ ಆರ್. ನಾಗರಾಜು, ದ್ವಿ.ದ.ಸ ಜಿಲ್ಲಾ ಪೊಲೀಸ್ ಕಚೇರಿ, ತುಮಕೂರುರವರು ಈ ಕೆಳಕಂಡ ಆರೋಪವನ್ನು ಎಸಗಿದ್ದು ಇವರಿಗೆ ಕೆ.ಸಿ.ಎಸ್.(ಸಿ.ಸಿ.ಎ) ನಿಯಮಗಳು, 1957ರ ನಿಯಮ 12ರನ್ವಯ ದೋಷಾರೋಪಣಾ ಪತ್ರವನ್ನು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಹೊರಡಿಸಲಾಗಿತ್ತು.

ಸದರಿಯವರು ವಿಶ್ರಾಂತಿ ವೇತನ ಶಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿ.ಟಿ.ಎನ್.ಶಿವಾನಂದ, ಎಪಿಸಿ–53 ಡಿಎಆರ್ ಇವರ ಕುಟುಂಬಕ್ಕೆ ವಿಶ್ರಾಂತಿ ವೇತನ ಹಾಗೂ ಇತರ ಉಪದಾನಗಳನ್ನು ನೀಡುವ ಸಂಬಂಧ ದಿ:01–08–2000ರಲ್ಲಿ ಮುಖ್ಯ ಕಚೇರಿಯಿಂದ ಸ್ಪಷ್ಟೀಕರಣವನ್ನು ಕೋರಲಾಗಿರುತ್ತದೆ. ಈ ಸಂಬಂಧದಲ್ಲಿ ದಿ:12–09–2000ರಲ್ಲಿ ಕೆಲವು ಮಾಹಿತಿ ಮತ್ತು ದಾಖಲೆಗಳನ್ನು ಕಳುಹಿಸುವಂತೆ ಸೂಚಿಸಲಾಗಿರುತ್ತದೆ. ನಂತರ ದಿ:23–10–2002ರಲ್ಲಿ ಮುಖ್ಯ ಕಚೇರಿಯಿಂದ ನೆನಪೋಲೆ ಬಂದಿದ್ದು, ಅದರಲ್ಲಿ ವಿಷಯವು ತುರ್ತು ಎಂದು ನಮೂದಿಸಲಾಗಿದ್ದರೂ ಸಹ ಡಿ.ಜಿ.ಪಿ.ರವರ ಕಚೇರಿಯಿಂದ ಕೋರಲಾಗಿರುವ ದಾಖಲಾತಿಗಳನ್ನು ಅಲ್ಲಿಗೆ ಕಳುಹಿಸುವ ಸಂಬಂಧ ಯಾವುದೇ ಕ್ರಮವನ್ನು ಕೈಗೊಳ್ಳದೇ ಇದ್ದು, ವಿಶ್ರಾಂತಿ ಶಾಖೆಯಿಂದ ವೇತನ ಶಾಖೆಗೆ ವರ್ಗಾವಣೆಗೊಂಡಾಗ ಸದರಿ ಕಡತವನ್ನು ಶ್ರೀ ಶ್ರೀನಿವಾಸ್, ಎ.ದ.ಸ.ರವರಿಗೆ ವಹಿಸಿಕೊಡದೇ ತಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನವನ್ನು ತೋರಿರುತ್ತಾರೆ.

ಆದ್ದರಿಂದ ಮೇಲಿನ ಆರೋಪಗಳ ವಿರುದ್ಧ ಕೆ.ಸಿ.ಎಸ್.(ಸಿ.ಸಿ.ಎ) ನಿಯಮಗಳು, 1957ರ ನಿಯಮ 11ರನ್ವಯ ಇಲಾಖಾ ವಿಚಾರಣೆ ನಡೆಸಲು ಪಿಐ., ಡಿ.ಸಿ.ಐ.ಬಿ, ಡಿ.ಪಿ.ಓ. ರವರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಯಿತು. ವಿಚಾರಣಾಧಿಕಾರಿಗಳು ನಿಯಮಾನುಸಾರ ಇಲಾಖಾ ವಿಚಾರಣೆಯನ್ನು ನಡೆಸಿ ಆರೋಪವು ಸಾಬೀತಾಗಿರುವುದಾಗಿ ತಮ್ಮ ಅಂತಿಮ ವರದಿಯಲ್ಲಿ ಅಭಿಪ್ರಾಯಪಟ್ಟಿರುತ್ತಾರೆ.

ಆಪಾದಿತರ ವಿರುದ್ಧದ ಆಪಾದನೆಗಳು ಸಾಬೀತಾದ ಕಾರಣ, ಇಲಾಖಾ ವಿಚಾರಣಾ ದಾಖಲಾತಿಗಳು, ಸಾಕ್ಷಿಗಳ ಹೇಳಿಕೆ ಹಾಗೂ ವಿಚಾರಣಾಧಿಕಾರಿಗಳ ಅಂತಿಮ ವರದಿ ಇವುಗಳನ್ನು ಪರಿಶೀಲಿಸಿ ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಒಪ್ಪಿ ಕಾರಣ ಕೇಳುವ ನೋಟಿಸ್‌ನ್ನು ಜಾರಿಗೊಳಿಸಲಾಗಿತ್ತು. ಸದರಿ ಕಾರಣ ಕೇಳುವ ನೋಟಿಸಿಗೆ ನೀಡಿದ ಸಮಜಾಯಿಷಿ

ಸಮಂಜಸವಾಗಿಲ್ಲದ್ದರಿಂದ ಅವರ ಸಮಜಾಯಿಷಿಯನ್ನು ಒಪ್ಪದೆ, ದಿನಾಂಕ:09–10–2007 ರಂದು ಸದರಿಯವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 03(ಮೂರು) ವರ್ಷಗಳ ಕಾಲ ಮುಂದೂಡಿ ಆದೇಶ ಹೊರಡಿಸಲಾಯಿತು ಹಾಗೂ ದಿ:07–08–2005 ರಿಂದ 03–03–2006ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತು ಎಂದು ಪರಿಗಣಿಸಲಾಗಿತ್ತು.

ಮೇಲೆ ಓದಲಾದ (2)ರಲ್ಲಿ ಶಿಸ್ತು ಪ್ರಾಧಿಕಾರಿಯು ದಂಡನೆಯನ್ನು ವಿಧಿಸಿ ದಿನಾಂಕ 09–10–2007 ರಂದು ಹೊರಡಿಸಿರುವ ಅಂತಿಮ ಆದೇಶದ ವಿರುದ್ಧ ಮೇಲೆ ಓದಲಾದ (3)ರಲ್ಲಿ ದಿನಾಂಕ 28–12–2007 ರಂದು ಮೇಲ್ಮನವಿಯನ್ನು ಸಲ್ಲಿಸಲಾಗಿರುತ್ತದೆ. ಮೇಲೆ ಓದಲಾದ (4)ರಲ್ಲಿ ಮೇಲ್ಮನವಿ ಪ್ರಾಧಿಕಾರವು ದಿನಾಂಕ 26–04–2008ರಂದು ಶಿಸ್ತು ಪ್ರಾಧಿಕಾರದ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅವಶ್ಯಕತೆ ಕಂಡು ಬರುವುದಿಲ್ಲವೆಂದು ಪರಿಗಣಿಸಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತದೆ.

ತದನಂತರ ಮೇಲೆ ಓದಲಾದ (5)ರಲ್ಲಿ ಸಲ್ಲಿಸಲಾಗಿರುವ ಪರಿಷ್ಕರಣಾ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಶಿಸ್ತು ಪ್ರಾಧಿಕಾರವು ದಿನಾಂಕ 09–10–2007ರಲ್ಲಿ ಹೊರಡಿಸಿರುವ ದಂಡನಾ ಆದೇಶವನ್ನು ಭಾಗಶಃ ಮಾರ್ಪಡಿಸಲು ನಿರ್ಣಯಿಸಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಮೇಲೆ ಓದಲಾದ (6)ರ ಪತ್ರದಲ್ಲಿ ಪಡೆಯಲಾಗಿರುತ್ತದೆ. ಅದರನ್ವಯ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 02 ಪೊಸಿಲಿ 2009 ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 26(ಎ) ಪ್ರಕಾರ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶಿಸ್ತು ಪ್ರಾಧಿಕಾರದ ದಿನಾಂಕ: 09–10–2007ರಂದು ಹೊರಡಿಸಿರುವ ದಂಡನಾ ಆದೇಶವನ್ನು ಭಾಗಶಃ ಮಾರ್ಪಡಿಸಿ ಶ್ರೀ ಆರ್.ನಾಗರಾಜು, ದ್ವಿ.ದ.ಸ. ಜಿಲ್ಲಾ ಪೊಲೀಸ್ ಕಚೇರಿ, ತುಮಕೂರು ಇವರ ಒಂದು ವಾರ್ಷಿಕ ಮುಂಬಡ್ತಿಯನ್ನು ಸಂಚಿತ ಪರಿಣಾಮವಿಲ್ಲದೆ ಆರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2416

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಹೊಸದಾಗಿ ರಚಿಸಲಾಗಿರುವ ಆಯೋಗ/ಸಮಿತಿ/ ಪ್ರಾಧಿಕಾರ/ ಮಿಷನ್/ಕಾರ್ಯಪಡೆಗಳಿಗೆ ಸೌಲಭ್ಯಗಳನ್ನು ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 41 ಶಿಸನೇ 2002, ದಿನಾಂಕ 17.06.2002

2. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 68 ಶಿವಾನೀ 2008, ದಿನಾಂಕ: 22/08/2008

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಸಚಿವರ ಸ್ಥಾನಮಾನ ಹೊಂದಿರುವ ಕಾರ್ಯನಿರ್ವಾಹಕ ಪ್ರಾಧಿಕಾರಿಗಳಿಗೆ ನೀಡಬೇಕಾಗಿರುವ ವೇತನ ಭತ್ಯೆ ಇನ್ನಿತರ ಸೌಲಭ್ಯಗಳನ್ನು ನಿಗದಿಪಡಿಸಲಾಗಿದೆ.

ರಾಜ್ಯದ ಸಮಗ್ರ ಅಭಿವೃದ್ಧಿಗಾಗಿ ರಾಜ್ಯದ ಸಂಪೂರ್ಣ ಸಾಮರ್ಥ್ಯವನ್ನು ಸಂಪೂರ್ಣ ಸದ್ಬಳಕೆ ಮಾಡುವ ಉದ್ದೇಶದಿಂದ ವಿವಿಧ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸಲು ರಾಜ್ಯ ಸರ್ಕಾರವು ವಿವಿಧ ಆಯೋಗ/ ಸಮಿತಿ/ ಪ್ರಾಧಿಕಾರ/ ಮಿಷನ್/ಕಾರ್ಯಪಡೆಗಳನ್ನು ಹೊಸದಾಗಿ ರಚಿಸಿದ್ದು, ಅಧ್ಯಕ್ಷರುಗಳನ್ನು ನೇಮಿಸಿ ಅವರುಗಳಿಗೆ ಸೂಕ್ತ ಸ್ಥಾನಮಾನಗಳನ್ನು ಸಹ ನೀಡಲಾಗಿದೆ. ಅವುಗಳಲ್ಲಿ ಕೆಲವು ಸಂಸ್ಥೆಗಳ ವಿವರ ಕೆಳಕಂಡಂತಿರುತ್ತದೆ.

| ಕ್ರ. ಸಂ. | ಅಧ್ಯಕ್ಷರ ಹೆಸರು | ಸಂಸ್ಥೆಗಳ ಹೆಸರು | ಆಡಳಿತ ಇಲಾಖೆ |
|---|---|---|---|
| 1 | ಶ್ರೀ ನಾಗರಾಜ್ ಶೆಟ್ಟಿ | ಕರ್ನಾಟಕ ಕರಾವಳಿ ಅಭಿವೃದ್ಧಿ ಪ್ರಾಧಿಕಾರ | ನಗರಾಭಿವೃದ್ಧಿ ಇಲಾಖೆ |
| 2 | ಡಾ.ಕಸ್ತೂರಿ ರಂಗನ್ | ಕರ್ನಾಟಕ ಜ್ಞಾನ (ಅರಿವು) ಆಯೋಗ | ಶಿಕ್ಷಣ ಇಲಾಖೆ |
| 3 | ಶ್ರೀ ಶಶಿಲ್ ನಮೋಶಿ | ನಂಜುಂಡಪ್ಪ ವರದಿಯ ಶಿಫಾರಸ್ಸಿನ ಅನುಷ್ಠಾನ ಸಮಿತಿ | ಯೋಜನಾ ಇಲಾಖೆ |
| 4 | ಪ್ರೊ.ಸಿ.ಎನ್.ಆರ್.ರಾವ್ | ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ | ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ |
| 5 | ಶ್ರೀ ಆನಂದ್ ಎ.ಎಸ್. | ಸಾವಯವ ಕೃಷಿ ಮಿಷನ್ | ಕೃಷಿ ಇಲಾಖೆ |

| ಕ್ರ. ಸಂ. | ಅಧ್ಯಕ್ಷರ ಹೆಸರು | ಸಂಸ್ಥೆಗಳ ಹೆಸರು | ಆಡಳಿತ ಇಲಾಖೆ |
|---|---|---|---|
| 6 | ಡಾ.ಎಸ್.ಎ. ಪಾಟೀಲ್ | ಕರ್ನಾಟಕ ಕೃಷಿ ಮಿಷನ್ | ಕೃಷಿ ಇಲಾಖೆ |
| 7 | ಶ್ರೀ ಅನಂತ ಹೆಗಡೆ ಅಶೀಸರ | ಪಶ್ಚಿಮ ಘಟ್ಟ (ಸಹ್ಯಾದ್ರಿ) ಕಾರ್ಯಪಡೆ | ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ |
| 8 | ಶ್ರೀ ವೈ.ಬಿ. ರಾಮಕೃಷ್ಣ | ಜೈವಿಕ ಇಂಧನ ಪಡೆ | ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ |
| 9 | ಶ್ರೀ ಸಿ.ಎಸ್.ವಿಶ್ವನಾಥ್ | ಕಾಮಗಾರಿಗಳ ಗುಣಮಟ್ಟ ನಿಯಂತ್ರಣ ಕಾರ್ಯಪಡೆ | ಲೋಕೋಪಯೋಗಿ ಇಲಾಖೆ |

ಹೊಸದಾಗಿ ರಚಿಸಲಾಗಿರುವ ಆಯೋಗ/ಸಮಿತಿ/ಪ್ರಾಧಿಕಾರ/ ಮಿಷನ್ ಕಾರ್ಯಪಡೆಗಳಿಗೆ ಸಂಬಂಧಿಸಿದ ಆಡಳಿತ ಇಲಾಖೆಗಳಿಂದ ವೇತನ ಭತ್ಯೆ ಹಾಗೂ ಇನ್ನಿತರ ಸೌಲಭ್ಯಗಳನ್ನು ನೀಡದಿರುವ ಬಗ್ಗೆ ಸಮಸ್ಯೆಗಳಿರುತ್ತವೆ. ಇವುಗಳ ಅಧ್ಯಕ್ಷರುಗಳಿಗೆ ಸಂಪುಟ ದರ್ಜೆ ಸಚಿವರ/ರಾಜ್ಯ ಸಚಿವರ ಸ್ಥಾನಮಾನ ನೀಡಿರುವುದರಿಂದ ಇವರುಗಳಿಗೆ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 41 ಶಿಸನೇ 2002, ದಿನಾಂಕ: 17/06/2002ರಲ್ಲಿ ಕಲ್ಪಿಸಿರುವ ಆರ್ಥಿಕ ಸೌಲಭ್ಯಗಳನ್ನು ಸಂಬಂಧಪಟ್ಟ ಆಡಳಿತ ಇಲಾಖೆಗಳು ನೀಡಬೇಕಾಗುತ್ತದೆ. ಸದರಿ ಅವಕಾಶದಂತೆ ಅವರುಗಳ ವೇತನ, ದಿನ ಭತ್ಯೆ, ಪ್ರವಾಸ ಭತ್ಯೆ, ಮನೆ ಬಾಡಿಗೆ ಭತ್ಯೆ, ವಾಹನ ಸೌಲಭ್ಯ, ಜೊತೆಗೆ ಆಪ್ತ ಸಿಬ್ಬಂದಿಗಳ ವೇತನ ಇತ್ಯಾದಿ ಸೇರಿ ವಾರ್ಷಿಕ ಸುಮಾರು ರೂ.70.00 ರಿಂದ ರೂ.80.00 ಲಕ್ಷಗಳ ವೆಚ್ಚ ಬರುವ ಸಾಧ್ಯತೆ ಇರುತ್ತದೆ. ಈ ವೆಚ್ಚವನ್ನು ಭರಿಸಲು ಸಂಬಂಧಪಟ್ಟ ಆಡಳಿತ ಇಲಾಖೆಗಳು ಆಯವ್ಯಯದಲ್ಲಿ ಸೂಕ್ತ ಹಣಾವಕಾಶಗಳನ್ನು ಕಲ್ಪಿಸಿಕೊಂಡು ಭರಿಸಬೇಕಾಗುತ್ತದೆ.

ಈ ಸಂಸ್ಥೆಗಳ ಅಧ್ಯಕ್ಷರುಗಳಿಗೆ ಸಂಬಂಧಪಟ್ಟ ಆಡಳಿತ ಇಲಾಖೆಗಳಿಂದ ನೀಡುತ್ತಿರುವ ಸೌಲಭ್ಯಗಳ ಬಗ್ಗೆ ಪರಿಶೀಲಿಸಲು ದಿನಾಂಕ: 29/01/2009 ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಸಭೆ ನಡೆದಿದ್ದು, ಸದರಿ ಸಭೆಯಲ್ಲಿ ಸಂಬಂಧಪಟ್ಟ ಇಲಾಖೆಗಳ ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು ಪ್ರಸ್ತುತ ಆ ಇಲಾಖೆಗಳಲ್ಲಿ ರಚಿಸಲಾಗಿರುವ ಅಧ್ಯಕ್ಷರುಗಳಿಗೆ ಸೌಲಭ್ಯಗಳನ್ನು ಒದಗಿಸುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಮುಖ್ಯ ಕಾರ್ಯದರ್ಶಿಗಳ ಗಮನಕ್ಕೆ ತಂದಿದ್ದು, ಈ ಅಧ್ಯಕ್ಷರುಗಳಿಗೆ ಸಚಿವ ಸ್ಥಾನಮಾನ ನೀಡಿರುವುದರಿಂದ ಸರ್ಕಾರಿ ಆದೇಶ ದಿನಾಂಕ:17/06/2002ರಲ್ಲಿ ಕಲ್ಪಿಸಿರುವ ಆರ್ಥಿಕ ಸೌಲಭ್ಯಗಳನ್ನು ನೀಡಲು ಅವಶ್ಯಕ ಕ್ರಮಕೈಗೊಳ್ಳುವಂತೆ ತಿಳಿಸಿರುತ್ತಾರೆ. ಈ ಸಂಸ್ಥೆಗಳ ಅಧ್ಯಕ್ಷರುಗಳಿಗೆ ಆಪ್ತ ಸಿಬ್ಬಂದಿ ನೇಮಿಸುವ ಸಂಬಂಧ ಇಲಾಖೆಗಳಲ್ಲಿ ಸಿಬ್ಬಂದಿ ಕೊರತೆಯಿದ್ದು, ಗ್ರೂಪ್–ಸಿ ಮತ್ತು ಗ್ರೂಪ್–ಡಿ ವರ್ಗದ ಸಿಬ್ಬಂದಿಯನ್ನು ಸಚಿವರುಗಳ ಆಪ್ತ ಶಾಖೆಯಲ್ಲಿ ನೇಮಿಸುವಂತೆ ಗುತ್ತಿಗೆ ಆಧಾರದ ಮೇಲೆ ನೇಮಿಸಲು ಅವಕಾಶ ಕಲ್ಪಿಸುವಂತೆ ಕೋರಿದ್ದರ ಹಿನ್ನೆಲೆಯಲ್ಲಿ ಈ ಬಗ್ಗೆ ಪರಿಶೀಲಿಸಿ ಸೂಕ್ತ ಅವಕಾಶವನ್ನು ಕಲ್ಪಿಸುವಂತೆ ಹಾಗೂ ಕಾರ್ಯಪಡೆಗಳ ಅಧಿಕಾರ ಅವಧಿ ಅವುಗಳ ಅಧಿಕಾರ ಮತ್ತು ಕರ್ತವ್ಯಗಳ ಬಗ್ಗೆ ಸಮರ್ಪಕವಾಗಿ ಮಾರ್ಗಸೂಚಿಯನ್ನು ಹೊರಡಿಸಲು ಮುಖ್ಯ ಕಾರ್ಯದರ್ಶಿಯವರು ಸೂಚಿಸಿರುತ್ತಾರೆ.

ಮೇಲೆ ವಿವರಿಸಿರುವ ಕಾರಣ ಹಿನ್ನೆಲೆಯಲ್ಲಿ ಈ ಸಂಸ್ಥೆಗಳ ಅಧ್ಯಕ್ಷರುಗಳಿಗೆ ಸಮರ್ಪಕವಾಗಿ ಕಾರ್ಯನಿರ್ವಹಿಸುವ ದೃಷ್ಟಿಯಿಂದ ಉಲ್ಲೇಖಿತ ಆದೇಶದಲ್ಲಿ ಕಲ್ಪಿಸಿರುವ ಸೌಲಭ್ಯಗಳನ್ನು ಹಾಗೂ ಅಗತ್ಯ ಸಿಬ್ಬಂದಿ ವರ್ಗ, ಕಚೇರಿ ಮತ್ತು ಪೀಠೋಪಕರಣಗಳನ್ನು ಸಂಬಂಧಪಟ್ಟ ಆಡಳಿತ ಇಲಾಖೆಗಳು ಒದಗಿಸುವ ದೃಷ್ಟಿಯಿಂದ ಮಾರ್ಗಸೂಚಿಯನ್ನು ಹೊರಡಿಸುವುದು ಅವಶ್ಯವೆಂದು ಸರ್ಕಾರವು ನಿರ್ಧರಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 06 ಶಿಸನೇ 2009, ಬೆಂಗಳೂರು, ದಿನಾಂಕ: 28ನೇ ಏಪ್ರಿಲ್ 2009**

1. ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಹೊಸದಾಗಿ ರಚಿಸಲಾಗಿರುವ ಆಯೋಗ/ ಸಮಿತಿ/ ಪ್ರಾಧಿಕಾರ/ ಮಿಷನ್/ಕಾರ್ಯಪಡೆಗಳ ಅಧ್ಯಕ್ಷರುಗಳಿಗೆ ಸಂಪುಟ ದರ್ಜೆ ಸಚಿವರ/ ರಾಜ್ಯ ಸಚಿವರ ಸ್ಥಾನಮಾನ ನೀಡಿರುವುದರಿಂದ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 41 ಶಿಸನೇ 2002, ದಿನಾಂಕ: 17.06.2002ರಲ್ಲಿ ಕಲ್ಪಿಸಿರುವ ಸೌಲಭ್ಯಗಳನ್ನು ಯಥಾವತ್ತಾಗಿ ನೀಡಲು ಆದೇಶಿಸಿದೆ.

2. ಈ ಅಧ್ಯಕ್ಷರುಗಳಿಗೆ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 68 ಶಿವಾನೀ 2008, ದಿನಾಂಕ: 22/08/2008ರಲ್ಲಿ ನಿಗದಿಪಡಿಸಿರುವ ರೂ.11.00 ಲಕ್ಷ ಆರ್ಥಿಕ ಮಿತಿಯೊಳಗೆ ವಾಹನ ಖರೀದಿಸಿ ಒದಗಿಸತಕ್ಕದ್ದು. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಿಂದ ಈಗಾಗಲೇ ಅಧ್ಯಕ್ಷರುಗಳ ಉಪಯೋಗಕ್ಕೆ ತಾತ್ಕಾಲಿಕವಾಗಿ ನೀಡಿರುವ ವಾಹನಗಳನ್ನು ಆಡಳಿತ ಇಲಾಖೆಯಿಂದ ಹೊಸ ವಾಹನಗಳನ್ನು ಖರೀದಿಸಿದ ನಂತರ ಅತಿಥಿ ಗೃಹಕ್ಕೆ ಹಿಂದಿರುಗಿಸತಕ್ಕದ್ದು.

3. ಮಾನ್ಯ ಮುಖ್ಯಮಂತ್ರಿಯವರ ಪೂರ್ವಾನುಮೋದನೆಯೊಂದಿಗೆ ಸಂಬಂಧಪಟ್ಟ ಆಡಳಿತ ಇಲಾಖೆಗಳು ಕೆಳಕಂಡಂತೆ ಕ್ರಮ ವಹಿಸತಕ್ಕದ್ದು.

1) ಇವುಗಳ ಅಧ್ಯಕ್ಷರುಗಳಿಗೆ ಕಚೇರಿ ಸ್ಥಳಾವಕಾಶ, ಪೀಠೋಪಕರಣ ಲೇಖನ ಸಾಮಗ್ರಿ ಇನ್ನಿತರ ಯಂತ್ರೋಪಕರಣಗಳನ್ನು ಮತ್ತು ಇತ್ಯಾದಿ ಸೌಲಭ್ಯಗಳನ್ನು ಆಡಳಿತ ಇಲಾಖೆಗಳೇ ಒದಗಿಸತಕ್ಕದ್ದು.

2) ಅಧ್ಯಕ್ಷರುಗಳಿಗೆ ಆಪ್ತ ಸಿಬ್ಬಂದಿಯನ್ನು ಸರ್ಕಾರಿ ಆದೇಶದ ದಿನಾಂಕ: 17/06/2002ರಲ್ಲಿ ತಿಳಿಸಿರುವಂತೆ ಆಪ್ತ ಕಾರ್ಯದರ್ಶಿ ಹುದ್ದೆಯನ್ನು ಗ್ರೂಪ್–ಎ ಅಥವಾ ಗ್ರೂಪ್–ಬಿ ಶ್ರೇಣಿಯ ಅಧಿಕಾರಿಗಳನ್ನು ನಿಯೋಜನೆ ಮೂಲಕ ಭರ್ತಿ ಮಾಡಿಕೊಳ್ಳತಕ್ಕದ್ದು, ಉಳಿದ ಸಿಬ್ಬಂದಿ ಅಂದರೆ ಗ್ರೂಪ್–ಸಿ ಮತ್ತು ಗ್ರೂಪ್–ಡಿ ವರ್ಗದ ನೌಕರರನ್ನು ಆಡಳಿತ ಹಾಗೂ ಇನ್ನಿತರ ಇಲಾಖೆಗಳಲ್ಲಿ ಸೂಕ್ತ ಸಿಬ್ಬಂದಿ ಇಲ್ಲದಿದ್ದ ಪಕ್ಷದಲ್ಲಿ ಗುತ್ತಿಗೆ ಆಧಾರದ ಮೇಲೆ ಅಧ್ಯಕ್ಷರ ಕಾರ್ಯಾವಧಿವರೆಗೆ ಮಾತ್ರ ನೇಮಿಸಿಕೊಳ್ಳತಕ್ಕದ್ದು.

3) ಯಾವ ಉದ್ದೇಶಗಳಿಗೆ ಕಾರ್ಯಪಡೆ ರಚನೆಯಾಗಿದೆಯೋ ಆ ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು ನಿಗದಿಪಡಿಸಿದ ಅವಧಿಯೊಳಗೆ ಗುರಿ ಸಾಧಿಸಲು ಸಂಬಂಧಪಟ್ಟ ಆಡಳಿತ ಇಲಾಖೆಗಳು ಎಲ್ಲಾ ರೀತಿಯ ಸಹಕಾರ ಮಾಹಿತಿ ಹಾಗೂ ಸೌಲಭ್ಯಗಳನ್ನು ಇವುಗಳಿಗೆ ಒದಗಿಸತಕ್ಕದ್ದು.

4) ಇವುಗಳ ನಿರ್ವಹಣೆಗಾಗಿ ಬೇಕಾಗುವ ಸಂಪನ್ಮೂಲವನ್ನು ಆಯವ್ಯಯದಲ್ಲಿ ಸೂಕ್ತ ಹಣಾವಕಾಶ ಕಲ್ಪಿಸಿಕೊಂಡು ಆಡಳಿತ ಇಲಾಖೆಗಳು ನಿಯಮಾನುಸಾರ ವೆಚ್ಚವನ್ನು ಭರಿಸತಕ್ಕದ್ದು, ಸರ್ಕಾರವು ಆಗಿಂದ್ದಾಗ್ಗೆ ಹೊರಡಿಸಿರುವ ಮಿತವ್ಯಯ ಆದೇಶವನ್ನು ಪಾಲಿಸಲು ಕ್ರಮಕೈಗೊಳ್ಳುವುದು.

5) ಅಧಿಕಾರೇತರ ಸದಸ್ಯರುಗಳಿಗೆ ಪ್ರವಾಸ ಭತ್ಯೆಯನ್ನು ಗ್ರೂಪ್–ಎ ಹಿರಿಯ ಶ್ರೇಣಿಯ ಅಧಿಕಾರಿಯು ಪಡೆಯುವ ದರದಲ್ಲಿ ನೀಡತಕ್ಕದ್ದು, (ಪ್ರಥಮ ದರ್ಜೆ/ ಹವಾ ನಿಯಂತ್ರಿತ 2ನೇ ದರ್ಜೆ ರೈಲಿನಲ್ಲಿ ಪ್ರಯಾಣ, ಆದರೆ ವಿಮಾನಯಾನ ದರ ಪಡೆಯುವಂತಿಲ್ಲ First class/Ac-II in train; but not airfare) ಸಭೆಗೆ ಹಾಜರಾಗುವ ಅಧಿಕಾರೇತರ ಸದಸ್ಯರುಗಳಿಗೆ ತಂಗಿದ ಪ್ರಯುಕ್ತ ದಿನ ಭತ್ಯೆಯನ್ನು ಪಡೆದಲ್ಲಿ ಸಭಾ ಭತ್ಯೆಯನ್ನು ರೂ.250/– ಗಳಿಗೆ ಸೀಮಿತಗೊಳಿಸಿದೆ ಹಾಗೂ ಯಾವುದೇ ದಿನ ಭತ್ಯೆಯನ್ನು ಪಡೆಯದಿದ್ದಲ್ಲಿ ಅವರುಗಳಿಗೆ ರೂ.500/– ಗಳ ಸಭಾ ಭತ್ಯೆಯನ್ನು ನೀಡತಕ್ಕದ್ದು.

6) ಪ್ರಸ್ತುತ ವಿಧಾನಸೌಧ, ವಿಕಾಸ ಸೌಧ ಮತ್ತು ಬಹುಮಹಡಿ ಕಟ್ಟಡಗಳಲ್ಲಿ ಸ್ಥಳಾವಕಾಶ ಲಭ್ಯವಿಲ್ಲದಿದ್ದಲ್ಲಿ ಈ ಸಂಸ್ಥೆಗಳಿಗೆ ಅಗತ್ಯವಾದ ಕಚೇರಿ ಸ್ಥಳಾವಕಾಶವನ್ನು ಸಂಬಂಧಪಟ್ಟ ಇಲಾಖೆಗಳ ವ್ಯಾಪ್ತಿಗೊಳಪಡುವ ಕಚೇರಿ ಕಟ್ಟಡಗಳಲ್ಲಿ ಒದಗಿಸತಕ್ಕದ್ದು.

7) ಸರ್ಕಾರವು ಈಗಾಗಲೇ ರಚಿಸಲಾಗಿರುವ ಹಾಗೂ ಮುಂದೆ ರಚಿಸಲಿರುವ ಇಂತಹ ಎಲ್ಲಾ ಸಂಸ್ಥೆಗಳಿಗೂ ಮೇಲ್ಕಂಡ ಸೌಲಭ್ಯಗಳು, ಷರತ್ತು ಮತ್ತು ನಿಬಂಧನೆಗಳು ಅನ್ವಯವಾಗುತ್ತದೆ.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 188 ವೆಚ್ಚ–12, 2009, ದಿನಾಂಕ:24/04/2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ತಿಪ್ಪೇಸ್ವಾಮಿ**

ಪಿ.ಆರ್. 2421

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ಜೆ.ಹೆಚ್.ಉಕ್ಕಡಗತ್ರಿ, ಅಂದಿನ ಅಬಕಾರಿ ಉಪ ಆಯುಕ್ತರು, ಹಾವೇರಿ ಜಿಲ್ಲೆ, ಹಾವೇರಿರವರ ಅಮಾನತ್ತನ್ನು ತೆರವುಗೊಳಿಸಿ ಸರ್ಕಾರದ ಸೇವೆಗೆ ಪುನರ್ ನೇಮಕಗೊಳಿಸುವ ಬಗ್ಗೆ.

**ಓದಲಾಗಿದೆ:**

1. ಮಾನ್ಯ ಅಬಕಾರಿ ವಾರ್ತಾ ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನ ಸಚಿವರ ವಿಶೇಷ ಅಧಿಕಾರಿಯವರ ವಸ್ತುನಿಷ್ಟಾ ವರದಿ ದಿನಾಂಕ: 16–07–2009.
2. ಸರ್ಕಾರದ ಆದೇಶ ಸಂಖ್ಯೆ: ಆಇ 116 ಇಪಿಎಸ್ 2009 ದಿನಾಂಕ:25–07–2009.
3. ಸರ್ಕಾರದ ಪತ್ರ ಸಂಖ್ಯೆ: ಆಇ 116 ಇಪಿಎಸ್ 2009 ದಿನಾಂಕ: 03–08–2009.
4. ಶ್ರೀ ಜೆ.ಹೆಚ್.ಉಕ್ಕಡಗತ್ರಿ, ಅಂದಿನ ಅಬಕಾರಿ ಉಪ ಆಯುಕ್ತರು, ಹಾವೇರಿ ಜಿಲ್ಲೆ, ಹಾವೇರಿ, ಇವರ ಮನವಿ ದಿನಾಂಕ: 14.08.2009.
5. ಅಬಕಾರಿ ಆಯುಕ್ತರು, ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ: ಇಸಿಇ/07/ಡಿಎಸ್‌ಸಿ(2)/2009 ದಿನಾಂಕ: 24–08–2009.

**ಪ್ರಸ್ತಾವನೆ**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಹಾವೇರಿ ಜಿಲ್ಲೆಯಲ್ಲಿ ಕಳ್ಳಭಟ್ಟಿ ಸಾರಾಯಿ ದಂಧೆ ಮತ್ತು ನಕಲಿ ಮದ್ಯ ಮಾರಾಟದ ಅಕ್ರಮ ಅವ್ಯವಹಾರಗಳು ನಡೆಯುತ್ತಿರುವುದಾಗಿ ವರದಿಯಾಗಿದ್ದು, ಮೇಲೆ ಓದಲಾದ ಕ್ರಮಾಂಕ (2)ರ ಸರ್ಕಾರದ ಆದೇಶದಲ್ಲಿ ಶ್ರೀ ಜೆ.ಹೆಚ್.ಉಕ್ಕಡಗಾತ್ರಿ, ಅಂದಿನ ಅಬಕಾರಿ ಉಪಆಯುಕ್ತರು, ಹಾವೇರಿ ಜಿಲ್ಲೆ, ಹಾವೇರಿ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ಮೇಲೆ ಓದಲಾದ ಕ್ರಮಾಂಕ (4) ರಲ್ಲಿರುವ ಮನವಿಯಲ್ಲಿ ಶ್ರೀ ಜೆ.ಹೆಚ್. ಉಕ್ಕಡಗಾತ್ರಿ, ಅಬಕಾರಿ ಉಪಆಯುಕ್ತರು, ಇವರು ದಿನಾಂಕ:14–08–2009ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ ಸರ್ಕಾರದ ಸೇವೆಗೆ ಪುನರ್ ನೇಮಕ ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (5)ರಲ್ಲಿ ಅಬಕಾರಿ ಆಯುಕ್ತರು, ಹಾವೇರಿ ಜಿಲ್ಲೆಯಲ್ಲಿ ಕಳ್ಳಭಟ್ಟಿ ಸಾರಾಯಿ ದಂಧೆ ಮತ್ತು ನಕಲಿ ಮದ್ಯ ಮಾರಾಟ ಹಾಗೂ ಇತರೆ ಅಬಕಾರಿ ಕಾಯ್ದೆ ಉಲ್ಲಂಘನೆಗಳು ನಿಯಂತ್ರಣದಲ್ಲಿರುವುದಾಗಿ ತಿಳಿಸಿದ್ದು, ಶ್ರೀ ಜೆ.ಹೆಚ್.ಉಕ್ಕಡಗಾತ್ರಿ, ಅಂದಿನ ಅಬಕಾರಿ ಉಪ ಆಯುಕ್ತರು, ಹಾವೇರಿ ಜಿಲ್ಲೆ, ಹಾವೇರಿ ಇವರ ಅಮಾನತ್ತನ್ನು ತೆರವುಗೊಳಿಸಿ ಗುಲ್ಬರ್ಗಾ ಜಿಲ್ಲೆಯಲ್ಲಿ ಹಾಲಿ ಖಾಲಿ ಇರುವ ಅಬಕಾರಿ ಉಪ ಆಯುಕ್ತರ ಹುದ್ದೆಗೆ ಇವರನ್ನು ನೇಮಿಸುವಂತೆ ಅಬಕಾರಿ ಆಯುಕ್ತರು ಶಿಫಾರಸ್ಸು ಮಾಡಿರುತ್ತಾರೆ.

ಸರ್ಕಾರವು ಅಬಕಾರಿ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಅಧಿಕಾರಿಯವರ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಪುನರ್ ನೇಮಕ ಮಾಡಲು ಸರ್ಕಾರವು ನಿರ್ಧರಿಸಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ–

**ಸರ್ಕಾರದ ಆದೇಶ ಸಂಖ್ಯೆ: ಆಇ 116 ಇಪಿಎಸ್ 2009 ಬೆಂಗಳೂರು, ದಿನಾಂಕ: 8ನೇ ಅಕ್ಟೋಬರ್ 2009**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಸರ್ಕಾರವು ಶ್ರೀ ಜೆ.ಹೆಚ್.ಉಕ್ಕಡಗಾತ್ರಿ, ಅಂದಿನ ಅಬಕಾರಿ ಉಪ ಆಯುಕ್ತರು, ಹಾವೇರಿ ಜಿಲ್ಲೆ ಹಾವೇರಿ ಇವರ ಅಮಾನತ್ತನ್ನು ತೆರವುಗೊಳಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(5) (ಸಿ) ರಂತೆ ಇವರನ್ನು ಸೇವೆಗೆ ಪುನರ್ ನೇಮಕಗೊಳಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2422

**ಬಿ.ಎನ್. ಜಗದೀಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಅಬಕಾರಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಕೆ.ಎ.ಹಿದಾಯತ್ತುಲ್ಲ, ಶಾಖಾಧಿಕಾರಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರ ಜನ್ಮ ದಿನಾಂಕವನ್ನು ಸರಿಪಡಿಸುವ ಬಗ್ಗೆ.

**ಓದಲಾಗಿದೆ:** 1) ಅಧಿಕಾರಿಯವರ ಮನವಿ ದಿನಾಂಕ: 13–07–2009

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಮನವಿಯಲ್ಲಿ ಶ್ರೀ ಕೆ.ಎ.ಹಿದಾಯತ್ತುಲ್ಲ, ಶಾಖಾಧಿಕಾರಿ, ಸಿಆಸು ಇಲಾಖೆ (ಕಾರ್ಯಕಾರಿ), ಕರ್ನಾಟಕ ಸರ್ಕಾರದ ಸಚಿವಾಲಯ, ಇವರು ಈ ಹಿಂದೆ ಪ್ರಥಮ ದರ್ಜೆ ಸಹಾಯಕರಾಗಿ ಸಿಟಿ ಸಿವಿಲ್ ಕೋರ್ಟ್ ನ್ಯಾಯಾಲಯದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ತಮ್ಮ ಜನ್ಮ ದಿನಾಂಕವನ್ನು ತಪ್ಪಾಗಿ ನಮೂದಿಸಿದ್ದು, ಅದನ್ನು ಸರಿಪಡಿಸುವ ಕುರಿತು ಮನವಿಯನ್ನು ಸಲ್ಲಿಸಿದ್ದು, ನ್ಯಾಯಾಂಗ ಇಲಾಖೆಯ ವತಿಯಿಂದ ಪರಿಶೀಲಿಸುವ ಹಂತದಲ್ಲಿ ತಾವು ಸಚಿವಾಲಯದಲ್ಲಿ ಶಾಖಾಧಿಕಾರಿಯಾಗಿ ಆಯ್ಕೆ ಹೊಂದಿ ನೇಮಕಗೊಂಡಿದ್ದರಿಂದ ಹಾಗೂ ಹಾಲಿ ಪ್ರಕರಣದಲ್ಲಿ ಸಕ್ಷಮ ಪ್ರಾಧಿಕಾರ ಕರ್ನಾಟಕ ಸರ್ಕಾರ ಸಚಿವಾಲಯ ಆಗಿದ್ದರಿಂದ ಈ ಬಗ್ಗೆ ಮುಂದಿನ ಕ್ರಮ ತೆಗೆದುಕೊಂಡು ಸೂಕ್ತ ಹಿಂಬರಹ ನೀಡಲು ಉಚ್ಛ ನ್ಯಾಯಾಲಯದ ರಿಜಿಸ್ಟ್ರಾರ್ (ವಿಜಿಲಿಯನ್ಸ್)ರವರು ಸಿಟಿ ಸಿವಿಲ್ ಕೋರ್ಟ್, ಬೆಂಗಳೂರು ಇವರಿಗೆ ತಿಳಿಸಿದ್ದು, ಈ ದಿಸೆಯಲ್ಲಿ ರಿಜಿಸ್ಟ್ರಾರ್ ಸಿಟಿ ಸಿವಿಲ್ ಕೋರ್ಟ್, ಬೆಂಗಳೂರು ಇವರು ಶ್ರೀ ಕೆ.ಎ.ಹಿದಾಯುತ್ತುಲ್ಲ, ಇವರಿಗೆ ಹಿಂಬರಹ ನೀಡಿದ್ದು, ಸದರಿ ಹಿಂಬರಹವನ್ನು ಲಗತ್ತಿಸಿ ಸಲ್ಲಿಸುತ್ತಾ, ತಮ್ಮ ಜನ್ಮ ದಿನಾಂಕವನ್ನು ಸರಿಪಡಿಸುವ ಕುರಿತು ಕೋರಿಕೆಯನ್ನು ಸಲ್ಲಿಸಿರುತ್ತಾರೆ. ಸದರಿ ವಿಷಯದ ಕುರಿತು ವಿಚಾರಣೆಯನ್ನು ನಡೆಸಲು Karnataka State Service (Determination of age) Act, 1974 ರ Section 5(3) ಅನುಸಾರ ವಿಚಾರಣಾಧಿಕಾರಿಯನ್ನು ನೇಮಕ ಮಾಡುವ ಸಂಬಂಧದಲ್ಲಿ ಪರಿಶೀಲಿಸಿದ್ದು, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಸಿಆಸುಇ 259 ಸಿಶಾಸೇ 2009, ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2009**

ಮೇಲಿನ ವಿಷಯದ ಬಗ್ಗೆ ಪರಿಶೀಲಿಸಿ ವರದಿಯನ್ನು ನೀಡುವ ಸಲುವಾಗಿ Karnataka State Service (Determination of age) Act, 1974 ರ Section 5(3) ರನ್ವಯ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ

ಅಪರ ಕಾರ್ಯದರ್ಶಿ–3ರವರನ್ನು ವಿಚಾರಣಾಧಿಕಾರಿಯನ್ನಾಗಿ, ನೇಮಕ ಮಾಡಲಾಗಿದೆ. ಹಾಗೂ ಸಿಆಸು ಇಲಾಖೆಯ ಸಿಬ್ಬಂದಿ–1 ಶಾಖೆಯ ಶಾಖಾಧಿಕಾರಿಯವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.

ಈ ಆದೇಶವನ್ನು ಕಾನೂನು ಇಲಾಖೆಯ ಕಾರ್ಯದರ್ಶಿಗಳ ಟಿಪ್ಪಣಿ ಸಂಖ್ಯೆ: LS 4731/09, ದಿನಾಂಕ: 24–09–2009ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎನ್. ಕೃಷ್ಣಮೂರ್ತಿ**

ಪಿ.ಆರ್. 2424 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸಿಬ್ಬಂದಿ)

**ವಿಷಯ:** ರಾಜ್ಯದಲ್ಲಿ ಸಂಭವಿಸಿರುವ ಪ್ರಕೃತಿ ವಿಕೋಪ ಪರಿಹಾರಕ್ಕಾಗಿ ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳು 10 ದಿನಗಳ ಸಂಬಳವನ್ನು ದೇಣಿಗೆಗಾಗಿ ನೀಡುತ್ತಿರುವ ಬಗ್ಗೆ.

**ಓದಲಾಗಿದೆ:** 1) ಅಧ್ಯಕ್ಷರು, ಕರ್ನಾಟಕ ಆಡಳಿತ ಸೇವೆ ಅಧಿಕಾರಿಗಳ ಸಂಘ (ರಿ), ಬೆಂಗಳೂರು ಇವರ ಮನವಿ ದಿನಾಂಕ: 8–10–09

2) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 23 ಟಿಎಆರ್ 09 ದಿನಾಂಕ: 29–09–09

3) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 16 ಎಸ್‌ಆರ್‌ಪಿ 09 ದಿನಾಂಕ: 09–10–09

**ಪ್ರಸ್ತಾವನೆ:**

ರಾಜ್ಯದಲ್ಲಿ ಪ್ರಕೃತಿ ವಿಕೋಪದಿಂದ ಸಂಭವಿಸಿರುವ ಅಪಾರ ಜೀವಹಾನಿ ಮತ್ತು ಮನೆಮಾರುಗಳ ನಾಶವನ್ನು ಮನಗಂಡು ಸಂತ್ರಸ್ತರಿಗೆ ಪರಿಹಾರವನ್ನು ಕಲ್ಪಿಸುವುದಕ್ಕಾಗಿ ಮೇಲೆ ಓದಲಾದ ಕ್ರಮಾಂಕ:1 ರ ದಿನಾಂಕ: 8–10–09ರಲ್ಲಿ ಅಧ್ಯಕ್ಷರು, ಕರ್ನಾಟಕ ಆಡಳಿತ ಸೇವೆ ಅಧಿಕಾರಿಗಳ ಸಂಘ (ರಿ) ಬೆಂಗಳೂರು ಇವರು ಮನವಿ ಸಲ್ಲಿಸಿ ಕರ್ನಾಟಕ ಆಡಳಿತ ಸೇವೆಗೆ ಸೇರಿದ ಎಲ್ಲಾ ಅಧಿಕಾರಿಗಳು ತಮ್ಮ 10 ದಿನಗಳ ಸಂಬಳವನ್ನು ದೇಣಿಗೆಯಾಗಿ ನೀಡಲು ಒಪ್ಪಿರುತ್ತಾರೆಂದು, ಅಕ್ಟೋಬರ್ 09 ಮಾಹೆಯಿಂದ ಫೆಬ್ರವರಿ–10 ಮಾಹೆಯವರೆಗೆ 5 ತಿಂಗಳ ಸಂಬಳದಲ್ಲಿ ಪ್ರತಿ ತಿಂಗಳು 2 ದಿನಗಳ ಸಂಬಳವನ್ನು ಅವರುಗಳ ಸಂಬಳದಿಂದ ಕಡಿತಗೊಳಿಸಿ, ಸರ್ಕಾರದ ವತಿಯಿಂದಲೇ ಮುಖ್ಯಮಂತ್ರಿಯವರ ಪರಿಹಾರ ನಿಧಿಗೆ ಸ್ವೀಕರಿಸಲು ಸೂಕ್ತ ಸರ್ಕಾರಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಮೇಲೆ ಓದಲಾದ ಕ್ರಮಾಂಕ: 2ರ ದಿನಾಂಕ: 29–09–09ರ ಸರ್ಕಾರಿ ಆದೇಶದಲ್ಲಿ ಸಾರ್ವಜನಿಕರಿಂದ ದೇಣಿಗೆಗಾಗಿ ನೀಡುವ ಪರಿಹಾರದ ನಿರ್ವಹಣೆಯನ್ನು ಯಾವ ರೀತಿಯಲ್ಲಿ ನಿರ್ವಹಿಸಬೇಕೆಂಬುದನ್ನು ತಿಳಿಸಲಾಗಿದೆ. ಮೇಲೆ ಓದಲಾದ ಕ್ರಮಾಂಕ: 3ರ ದಿನಾಂಕ 9–10–09ರ ಸರ್ಕಾರಿ ಆದೇಶದಲ್ಲಿ ರಾಜ್ಯ ಸರ್ಕಾರಿ ನೌಕರರಿಂದ ಒಂದು ದಿನದ ಸಂಬಳ ಕೊಡುಗೆಯನ್ನು ಸ್ವೀಕರಿಸುವ ಸಂಬಂಧ ವಿವರವಾಗಿ ಅನುಸರಿಸಬೇಕಾದ ಮಾರ್ಗಸೂಚಿ ನೀಡಲಾಗಿದೆ.

ಮೇಲೆ ವಿವರಿಸಿದ ಸಂದರ್ಭದಲ್ಲಿ ಸರ್ಕಾರವು ಕರ್ನಾಟಕ ಆಡಳಿತ ಸೇವೆ ಅಧಿಕಾರಿಗಳ ಸಂಘದ ಕೊಡುಗೆಯನ್ನು ಶ್ಲಾಘಿಸುತ್ತಾ ಅವರು ಒಪ್ಪಿದಂತೆ ದೇಣಿಗೆ ಹಣವನ್ನು ಸ್ವೀಕರಿಸುವ ಸಂಬಂಧದಲ್ಲಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 448 ಆಸೇಇ 2009, ಬೆಂಗಳೂರು ದಿನಾಂಕ: 15ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣದಿಂದಾಗಿ, ಸರ್ಕಾರಿ ಆದೇಶ ದಿನಾಂಕ:29–09–09 ಹಾಗೂ ದಿನಾಂಕ: 09–10–09ರಲ್ಲಿ ಸೂಚಿಸಿರುವ ಮಾರ್ಗಸೂಚಿಯಂತೆ ಕರ್ನಾಟಕ ಆಡಳಿತ ಸೇವೆಗೆ ಸೇರಿದ ಎಲ್ಲಾ ಅಧಿಕಾರಿಗಳ ಅಕ್ಟೋಬರ್ 09 ಮಾಹೆಯಿಂದ ಫೆಬ್ರವರಿ 2010 ರ ಮಾಹೆಯವರೆಗೆ 5 ತಿಂಗಳ ಸಂಬಳದಲ್ಲಿ ಪ್ರತಿ ತಿಂಗಳು 2 ದಿನಗಳ ಸಂಬಳವನ್ನು ಹೀಗೆ ಒಟ್ಟು 10 ದಿನಗಳ ಸಂಬಳವನ್ನು ಕರ್ನಾಟಕ ಪ್ರಕೃತಿ ವಿಕೋಪ ಪರಿಹಾರ ನಿಧಿಗೆ ಅವರುಗಳ ಸಂಬಳದಿಂದ ಕಠಾಯಿಸಿ ಸಂದಾಯಿಸಲು ಆದೇಶಿಸಿದೆ.

ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳ ಸಂಘವು 10 ದಿನಗಳ ಸಂಬಳವನ್ನು ಪರಿಹಾರ ನಿಧಿಗೆ ನೀಡಲು ಒಪ್ಪಿರುವುದರಿಂದ, ಇವರುಗಳಿಗೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 16 ಎಸ್‌ಆರ್‌ಪಿ 2009 ದಿನಾಂಕ: 9–10–09ರ ಪ್ರಕಾರ ಒಂದು ದಿನದ ಸಂಬಳವನ್ನು ದೇಣಿಗೆಯಾಗಿ ನೀಡುವುದು ಅನ್ವಯವಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**

ಪಿ.ಆರ್. 2425 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

## ಶಿಕ್ಷಣ ಸಚಿವಾಲಯ

**ವಿಷಯ:** ತರಗತಿ ಬೋಧನೆಯಲ್ಲಿ ತಂತ್ರಜ್ಞಾನ ಅಳವಡಿಕೆಗಾಗಿ ಸಂಚಿತ ನಿಧಿಯ ಹಣವನ್ನು ಉಪಯೋಗಿಸಲು ಅನುಮತಿ ನೀಡುವ ಕುರಿತು.

**ಓದಲಾಗಿದೆ:** ನಿರ್ದೇಶಕರು (ಪ್ರೌಢ ಶಿಕ್ಷಣ) ಆಯುಕ್ತರ ಕಚೇರಿ ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಸಿ4(3) ಶಾ.ಸಂ.ನಿ/13/2006–07 ದಿನಾಂಕ: 20–04–2009.

**ಪ್ರಸ್ತಾವನೆ:**

1) ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು (ಪ್ರೌಢಶಿಕ್ಷಣ) ಆಯುಕ್ತರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು 8,9,10ನೇ ತರಗತಿ ಬೋಧನೆಯಲ್ಲಿ ತಂತ್ರಜ್ಞಾನ ಅಳವಡಿಸಲು ತಲಾ ಒಂದು ವಿಭಾಗಕ್ಕೆ 29" ಟಿವಿ ಹಾಗೂ ಕಂಪ್ಯೂಟರ್ ಅಳವಡಿಸಿ, ಭಾರತೀಯ ವಿದ್ಯಾ ಕಲಿಕಾ ಕಾರ್ಯಕ್ರಮದಡಿಯಲ್ಲಿ ವಿಜ್ಞಾನ, ಗಣಿತ ಹಾಗೂ ಸಮಾಜ ವಿಜ್ಞಾನ ಬೋಧನೆಯನ್ನು ಪರಿಣಾಮಕಾರಿಯನ್ನಾಗಿಸಲು JIL Information Technology limited ಇವರಿಂದ ವಿವರವಾದ ಪ್ರಸ್ತಾವನೆ ಪಡೆದು ಅದರಂತೆ ಮಾಹೆಯಾನ ರೂ.14,000/–ದಂತೆ 36 ತಿಂಗಳ ಅವಧಿಯಲ್ಲಿ ಒಟ್ಟು 5.04 ಲಕ್ಷ ರೂ.ಗಳನ್ನು ಸಂಸ್ಥೆಗೆ ಪಾವತಿಸಬೇಕಾಗಿದ್ದು, ಮೊದಲನೇ ಕಂತನ್ನು ಪ್ರಸ್ತುತ ವರ್ಷದ ಪ್ರಯೋಗಾಲಯ ಹಾಗೂ ಧೃಕ್–ಶ್ರವಣ ನಿಧಿಯಿಂದ ಪಾವತಿಸಲಾಗಿದ್ದು, ಆ ಕಂತುಗಳನ್ನು ಪ್ರೌಢಶಾಲಾ ಮೂಲಭೂತ ಸೌಕರ್ಯ ಅಭಿವೃದ್ಧಿಗಾಗಿ ಮಂಜೂರಾಗಿರುವ ನಿಧಿಯಲ್ಲಿ ಭರಿಸಲು ಎಸ್.ಡಿ.ಎಂ.ಸಿ ಸಭೆಯಲ್ಲಿ ತೀರ್ಮಾನಿಸಲಾಗಿದೆ. ಉಳಿದ 9 ಕಂತುಗಳನ್ನು ಶಾಲಾ ಸಂಚಿತ ನಿಧಿಯಲ್ಲಿ ಉಳಿದಿರುವ ಸುಮಾರು 1,00ಲಕ್ಷ ರೂ.ಗಳಲ್ಲಿ ಭರಿಸಲು ಅನುಮತಿ ನೀಡುವಂತೆ ಸರ್ಕಾರದ ಅನುಮತಿಯನ್ನು ಕೋರಿರುತ್ತಾರೆ.

2) ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 100: ಯೋಯೋಕ 2009, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2009**

**(ಇಡಿ 128 ಸ್ವೀಮರ (ಯುನಿಕ್) 2009, ದಿನಾಂಕ:14ನೇ ಅಕ್ಟೋಬರ್ 2009)**

3) 8,9,10 ನೇ ತರಗತಿ ಬೋಧನೆಯಲ್ಲಿ ತಂತ್ರಜ್ಞಾನ ಅಳವಡಿಸಲು ತಲಾ ಒಂದು ವಿಭಾಗಕ್ಕೆ 29" ಟಿವಿ ಹಾಗೂ ಕಂಪ್ಯೂಟರ್ ಅಳವಡಿಸಿ, ಭಾರತೀಯ ವಿದ್ಯಾ ಕಲಿಕಾ ಕಾರ್ಯಕ್ರಮದಡಿಯಲ್ಲಿ ವಿಜ್ಞಾನ, ಗಣಿತ ಹಾಗೂ ಸಮಾಜ ವಿಜ್ಞಾನ ಬೋಧನೆಯನ್ನು ಪರಿಣಾಮಕಾರಿಯನ್ನಾಗಿಸಲು JIL Information Technology limited ಇವರಿಂದ ಪಡೆದ ಸಹಾಯಕ್ಕಾಗಿ ಆ ಸಂಸ್ಥೆಗೆ ಪಾವತಿಸಬೇಕಾದ ಒಟ್ಟು 5.04 ಲಕ್ಷ ರೂ.ಗಳಲ್ಲಿ ಈಗಾಗಲೇ ಸಂಸ್ಥೆಗೆ ಪಾವತಿಸಲಾಗಿರುವ ಅನುದಾನವನ್ನು ಹೊರತುಪಡಿಸಿ ಉಳಿದ ಕಂತುಗಳನ್ನು ಪಾವತಿಸಲು ಶಾಲಾ ಸಂಚಿತ ನಿಧಿಯಲ್ಲಿ ಉಳಿದಿರುವ ಸುಮಾರು 1.00ಲಕ್ಷ ರೂ.ಗಳಲ್ಲಿ ಒಂದು ವರ್ಷಕ್ಕೆ 50,000/– ರೂಪಾಯಿಗಳಿಗೆ ಮೀರದಂತೆ ಬಳಸಿಕೊಳ್ಳಲು ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

4) ಈ ಆದೇಶವನ್ನು ಅಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿಇ 1128 ಐಎಫ್ (ಬಿ&ಎ) 2009, ದಿನಾಂಕ: 14.05.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ.ಎಫ್. ಮಾಗಿ**

ಪಿ.ಆರ್. 2426

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಎಲ್.ಸಿ.ಗಾಣಿಗೇರ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಚಿಕ್ಕೋಡಿ ಮತ್ತು ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಗೋಕಾಕ್ ಇಲ್ಲಿನ 5 ಮಂದಿ ಅಧಿಕಾರಿಗಳು ಎಸೆಗಿದ ಅಕ್ರಮಗಳಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಉಪಲೋಕಾಯುಕ್ತರಿಗೆ ವಹಿಸುವ ಬಗ್ಗೆ ಆದೇಶ.

**ಓದಲಾಗಿದೆ:** ಸಹಾಯಕ ನಿಬಂಧಕರು, (ಕಾನೂನು ಅಭಿಪ್ರಾಯ–4) ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ D.O.NO.COMPT/UPLOK/BGM-186/09/ARLO-4 ದಿನಾಂಕ: 15–09–2009

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸಹಾಯಕ ನಿಬಂಧಕರು (ಕಾನೂನು ಅಭಿಪ್ರಾಯ–4) ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀ ಎಲ್.ಸಿ.ಗಾಣಿಗೇರ ಅಂದಿನ ಕಾರ್ಯಪಾಲಕ ಇಂಜಿನಿಯರ್ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಚಿಕ್ಕೋಡಿ ಮತ್ತು ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಗೋಕಾಕ್ ಇಲ್ಲಿನ 5

ಮಂದಿ ಅಧಿಕಾರಿಗಳು ಎಸೆಗಿದ ಅಕ್ರಮಗಳಿಗೆ ಸಂಬಂಧಿಸಿದಂತೆ ಸದರಿಯವರುಗಳ ವಿರುದ್ಧ ಮಾನ್ಯ ಶಾಸಕರಾದ ಶ್ರೀ ಸತೀಶ್ ಜಾರಕಿಹೊಳಿ ಇವರು ದೂರು ಸಲ್ಲಿಸಿದ್ದ ಮೇರೆಗೆ ಕೈಗೊಂಡ ತನಿಖೆ ವರದಿಯನ್ನು ಹಾಗೂ ಮಾನ್ಯ ಉಪ ಲೋಕಾಯುಕ್ತರು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಸೆಕ್ಷನ್ 12(3)ರಡಿ ನೀಡಿರುವ ವರದಿಯನ್ನು ಕಳುಹಿಸುತ್ತಾ ಮಾನ್ಯ ಉಪಲೋಕಾಯುಕ್ತರ ಶಿಫಾರಸ್ಸಿನಂತೆ ಕ್ರಮವಹಿಸಲು ಕೋರಿರುತ್ತಾರೆ.

ಮಾನ್ಯ ಉಪಲೋಕಾಯುಕ್ತರು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಸೆಕ್ಷನ್ 12(3) ರಡಿ ಕಳುಹಿಸಿರುವ ತಮ್ಮ ವರದಿಯಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಗೋಕಾಕ್ ಇಲ್ಲಿ ಸರ್ಕಾರದ ಕಾಮಗಾರಿಗಳನ್ನು ನಿರ್ವಹಿಸಿದ ಕೆಳಕಂಡ 6 ಮಂದಿ ಆರೋಪಿತ ಇಂಜಿನಿಯರ್‌ಗಳು, ಸರ್ಕಾರವು ಮಂಜೂರು ಮಾಡಿದ ಹಣವನ್ನು ಡ್ರಾ ಮಾಡಿ, ಕಾಮಗಾರಿಗಳನ್ನು ಪೂರೈಸದೇ ಹಣವನ್ನು ವಿತರಿಸಿ ಕರ್ತವ್ಯಲೋಪ ಎಸೆಗಿರುವುದಾಗಿ ತಿಳಿಸುತ್ತಾ, ಇದರಿಂದಾಗಿ ಸದರಿ ಆರೋಪಿತರು ಸರ್ಕಾರದ ಕೆಲಸದಲ್ಲಿ ತೀವ್ರತರ ದುರ್ನಡತೆ ಎಸೆಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ, ಅವರುಗಳಿಗೆ ಕಠಿಣ ದಂಡನೆ ವಿಧಿಸುವ ಸಲುವಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14–A ರಡಿಯಲ್ಲಿ ಇಲಾಖಾ ವಿಚಾರಣೆ ಪ್ರಾರಂಭಿಸಲು ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತಕ್ಕೆ ವಹಿಸಲು ಶಿಫಾರಸ್ಸು ಮಾಡಿರುತ್ತಾರೆ.

1. ಶ್ರೀ ಎಲ್.ಸಿ. ಗಾಣಿಗೇರ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಚಿಕ್ಕೋಡಿ, ಬೆಳಗಾವಿ ಜಿಲ್ಲೆ.
2. ಶ್ರೀ ಎಸ್.ಜಿ. ಮಾನೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಗೋಕಾಕ್, ಬೆಳಗಾವಿ ಜಿಲ್ಲೆ.
3. ಶ್ರೀ ಆರ್.ವಿ. ಶಿವರಾಯಿ, ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಗೋಕಾಕ್, ಬೆಳಗಾವಿ ಜಿಲ್ಲೆ.
4. ಶ್ರೀ ವಸಂತಕುಮಾರ್, ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಗೋಕಾಕ್, ಬೆಳಗಾವಿ ಜಿಲ್ಲೆ.
5. ಶ್ರೀ ರಾಜಕುಮಾರ್, ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಗೋಕಾಕ್, ಬೆಳಗಾವಿ ಜಿಲ್ಲೆ.
6. ಶ್ರೀ ಎಂ.ಆರ್. ಕುಲಕರ್ಣಿ, ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಗೋಕಾಕ್, ಬೆಳಗಾವಿ ಜಿಲ್ಲೆ.

ಅದರಂತೆ ಮೇಲ್ಕಂಡ 6 ಮಂದಿ ಆರೋಪಿತರ ವಿರುದ್ಧದ ಆರೋಪಗಳು ಲೋಕಾಯುಕ್ತ ತನಿಖೆಯಲ್ಲಿ ನಿಜವೆಂದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸಿನಂತೆ ಪ್ರಕರಣದಲ್ಲಿನ ಆರೋಪಿಗಳ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಲು ಹಾಗೂ ಅದಕ್ಕಾಗಿ ವಿವರವಾದ ಇಲಾಖಾ ವಿಚಾರಣೆ ಕೈಗೊಳ್ಳಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14(ಎ)ರಡಿಯಲ್ಲಿ ಪ್ರಕರಣವನ್ನು ಕರ್ನಾಟಕ ಉಪಲೋಕಾಯುಕ್ತಕ್ಕೆ ವಹಿಸಲು ಸರ್ಕಾರವು ನಿರ್ಣಯಿಸಿದೆ. ಅದರಂತೆ ಕೆಳಕಂಡ ಆದೇಶ.

**ಆದೇಶ ಸಂಖ್ಯೆ ಗ್ರಾಅಪ 18 ಇಎನ್‌ಕ್ಯೂ 09, ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕೆಳಕಂಡ 6 ಮಂದಿ ಆರೋಪಿತರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 ಸಹವಾಚನ ನಿಯಮ 13ರ ರೀತ್ಯ ಜಂಟಿ ಇಲಾಖಾ ವಿಚಾರಣೆ ನಡೆಸಲು ಸದರಿ ನಿಯಮಗಳ ನಿಯಮ 14(ಎ) ರನ್ವಯ ಈ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿ ಆದೇಶಿಸಿದೆ.

1. ಶ್ರೀ ಎಲ್.ಸಿ. ಗಾಣಿಗೇರ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಚಿಕ್ಕೋಡಿ, ಬೆಳಗಾವಿ ಜಿಲ್ಲೆ.
2. ಶ್ರೀ ಎಸ್.ಜಿ. ಮಾನೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಗೋಕಾಕ್, ಬೆಳಗಾವಿ ಜಿಲ್ಲೆ.
3. ಶ್ರೀ ಆರ್.ವಿ. ಶಿವರಾಯಿ, ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಗೋಕಾಕ್, ಬೆಳಗಾವಿ ಜಿಲ್ಲೆ.
4. ಶ್ರೀ ವಸಂತಕುಮಾರ್, ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಗೋಕಾಕ್, ಬೆಳಗಾವಿ ಜಿಲ್ಲೆ.

5. ಶ್ರೀ ರಾಜಕುಮಾರ್, ಸಹಾಯಕ ಇಂಜಿನಿಯರ್, (ಅಮಾನತ್ತಿನಲ್ಲಿ) ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಗೋಕಾಕ್, ಬೆಳಗಾವಿ ಜಿಲ್ಲೆ.
6. ಶ್ರೀ ಎಂ.ಆರ್. ಕುಲಕರ್ಣಿ, ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಗೋಕಾಕ್, ಬೆಳಗಾವಿ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಂಭುಲಿಂಗಯ್ಯ**

ಪಿ.ಆರ್. 2427

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಂ.ಎಸ್.ಪವನ್ ಕುಮಾರ್, ಪಿ.ಎಸ್.ಐ. ಡಿ.ಜಿ ಮತ್ತು ಐ.ಜಿ.ಪಿ ಇವರ ಕಚೇರಿ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರ ಆದೇಶ ಸಂಖ್ಯೆ: ಶಿಕ್ಷಾಪಟ್ಟಿ/38/2008 ದಿನಾಂಕ: 25–06–2008
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ–3/26/ಪವ/2008 ದಿನಾಂಕ: 28–08–2008
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 10–11–2008
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2) 102/2008–09 ದಿನಾಂಕ: 30–3–2009
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 71 ಸಿಎನ್‌ಎಸ್ 2009 ದಿನಾಂಕ: 23–07–2009.

**ಪ್ರಸ್ತಾವನೆ:**

ಶ್ರೀ ಎಂ.ಎಸ್. ಪವನ್‌ಕುಮಾರ್ ಪಿ.ಎಸ್.ಐ. ಇವರು ಸುಳ್ಯ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

> "ನ್ಯಾಯಾಲಯದಿಂದ ಸ್ವೀಕೃತವಾದ ಖಾಸಗಿ ಪಿರ್ಯಾದಿಯನ್ನು ಠಾಣೆಯಲ್ಲಿಯೇ ಇಟ್ಟುಕೊಂಡು ನ್ಯಾಯಾಲಯದ ನಿರ್ದೇಶನವನ್ನು ಕಡೆಗಣಿಸಿ ವಿಳಂಬವಾಗಿ ಪ್ರಕರಣ ದಾಖಲಿಸಿ ಕರ್ತವ್ಯ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿ ಪ್ರದರ್ಶಿಸಿರುವುದು"

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 25–06–2008ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮೂರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 28–08–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪಿರ್ಯಾದುದಾರರು ನ್ಯಾಯಾಲಯದಿಂದ ಪಿರ್ಯಾದು ಹಿಂಪಡೆದುಕೊಂಡಿರುವುದರಿಂದ ಅದನ್ನು ವಿಲೇ ಮಾಡಿರುವ ಬಗ್ಗೆ ಹಿಂದಿನ ಠಾಣಾಧಿಕಾರಿಗಳು ದಾಖಲಿಸದೆ ಇದ್ದ ಕಾರಣ ಈ ಗೊಂದಲಕ್ಕೆ ಎಡೆಮಾಡಿಕೊಟ್ಟಿರುವುದನ್ನು ಗಮನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಅರ್ಜಿದಾರರಿಗೆ ವಿಧಿಸಿದ ದಂಡನೆಯನ್ನು ಪುನರ್ ಪರಿಶೀಲಿಸಲು ತೀರ್ಮಾನಿಸಿ, ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 369 ಪೊಸಿಅ 2008 ಬೆಂಗಳೂರು ದಿನಾಂಕ: 23ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಎಸ್.ಪವನ್‌ಕುಮಾರ್, ಪಿ.ಎಸ್.ಐ., ಬೆಂಗಳೂರು ಇವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯನ್ನು ರದ್ದುಪಡಿಸಿ, ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2430

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಅಧೀಕ್ಷಕರ ಮತ್ತು ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಹೊಸದಾಗಿ ಸೃಜನೆ ಮಾಡುವ ಕುರಿತು.

**ಓದಲಾಗಿದೆ:** ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ: ಡಿಪಿಎನ್/ಸಿಶಾ2/83/91–92 ದಿನಾಂಕ: 17.01.2009

**ಪ್ರಸ್ತಾವನೆ:**

ಮೇಲೆ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ: 17.01.2009 ಪತ್ರದಲ್ಲಿ ಈ ಕೆಳಕಂಡ 8 ಜಿಲ್ಲೆಗಳ ಸರ್ಕಾರಿ ಅಭಿಯೋಜಕರ ಕಚೇರಿಗಳಿಗೆ ಆಡಳಿತಾತ್ಮಕ ದೃಷ್ಟಿಯಿಂದ ತಲಾ ಒಂದು ಅಧೀಕ್ಷಕರ ಹುದ್ದೆಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

1. ಸರ್ಕಾರಿ ಅಭಿಯೋಜಕರ ಕಚೇರಿ, ಚಿತ್ರದುರ್ಗ,
2. ಸರ್ಕಾರಿ ಅಭಿಯೋಜಕರ ಕಚೇರಿ, ಶಿವಮೊಗ್ಗ
3. ಸರ್ಕಾರಿ ಅಭಿಯೋಜಕರ ಕಚೇರಿ, ರಾಯಚೂರು
4. ಸರ್ಕಾರಿ ಅಭಿಯೋಜಕರ ಕಚೇರಿ,ಬಳ್ಳಾರಿ
5 ಸರ್ಕಾರಿ ಅಭಿಯೋಜಕರ ಕಚೇರಿ, ಮಂಡ್ಯ
6. ಸರ್ಕಾರಿ ಅಭಿಯೋಜಕರ ಕಚೇರಿ, ಹಾಸನ
7. ಸರ್ಕಾರಿ ಅಭಿಯೋಜಕರ ಕಚೇರಿ, ಚಿಕ್ಕಮಗಳೂರು
8. ಸರ್ಕಾರಿ ಅಭಿಯೋಜಕರ ಕಚೇರಿ, ಬೀದರ್

ಸದರಿ ಪ್ರಸ್ತಾವನೆಯಲ್ಲಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 508 ಪಿಪಿಇ 2007, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2009**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಈ ಕೆಳಕಂಡ ಸರ್ಕಾರಿ ಅಭಿಯೋಜಕರ ಕಚೇರಿಗಳಿಗೆ ತಲಾ ಒಂದು ಹುದ್ದೆಯಂತೆ 8 ಅಧೀಕ್ಷಕರ ಹುದ್ದೆಗಳನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಿದೆ.

| ಕ್ರ. ಸಂ. | ಕಚೇರಿಯ ಹೆಸರು | ಹುದ್ದೆಯ ಸಂಖ್ಯೆ |
|---|---|---|
| 1 | ಸರ್ಕಾರಿ ಅಭಿಯೋಜಕರ ಕಚೇರಿ ಚಿತ್ರದುರ್ಗ | 01 |
| 2 | ಸರ್ಕಾರಿ ಅಭಿಯೋಜಕರ ಕಚೇರಿ, ಶಿವಮೊಗ್ಗ | 01 |
| 3 | ಸರ್ಕಾರಿ ಅಭಿಯೋಜಕರ ಕಚೇರಿ, ರಾಯಚೂರು | 01 |
| 4 | ಸರ್ಕಾರಿ ಅಭಿಯೋಜಕರ ಕಚೇರಿ, ಬಳ್ಳಾರಿ | 01 |
| 5 | ಸರ್ಕಾರಿ ಅಭಿಯೋಜಕರ ಕಚೇರಿ, ಮಂಡ್ಯ | 01 |
| 6 | ಸರ್ಕಾರಿ ಅಭಿಯೋಜಕರ ಕಚೇರಿ, ಹಾಸನ | 01 |
| 7 | ಸರ್ಕಾರಿ ಅಭಿಯೋಜಕರ ಕಚೇರಿ, ಚಿಕ್ಕಮಗಳೂರು | 01 |
| 8 | ಸರ್ಕಾರಿ ಅಭಿಯೋಜಕರ ಕಚೇರಿ, ಬೀದರ್ | 01 |

ಮುಂದುವರೆದು, ಚಾಮರಾಜನಗರದ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಒಂದು ಸರ್ಕಾರಿ ಅಭಿಯೋಜಕರ ಹುದ್ದೆಯನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಿದೆ.

ಮೇಲೆ ಸೃಜಿಸಲಾಗಿರುವ ಹುದ್ದೆಗಳನ್ನು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಭರ್ತಿ ಮಾಡತಕ್ಕದ್ದು.

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "2014 ನ್ಯಾಯಪರಿಪಾಲನೆ–00–114–ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು–0–02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು" ಇದರಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಎಫ್‌ಡಿ 231 ವೆಚ್ಚ 11/2009, ದಿನಾಂಕ: 30.09.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಪಿ.ಆರ್. 2431 ಸರ್ಕಾರದ ಅಧೀನ ಕಾರ್ಯದರ್ಶಿ ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗಗಳು)

**ವಿಷಯ:** ಕೆಲ ತ್ವರಿತ ಗತಿ ನ್ಯಾಯಾಲಯಗಳು ಸ್ಥಳಾಂತರಗೊಂಡಿರುವುದರಿಂದ ಅವುಗಳಿಗೆ ಹೊಂದಿಕೊಂಡಂತೆ ಮಂಜೂರಾಗಿದ್ದ ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಸ್ಥಳಾಂತರಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂ: ಒಇ 32 ಪಿಪಿಇ 2004, ದಿನಾಂಕ: 25.01.2005
2) ತಿದ್ದೋಲೆ ಸಂ:ಒಇ 58 ಪಿಪಿಇ 2005, ದಿನಾಂಕ:07.03.2005
3) ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯರವರ ಪತ್ರದ ಸಂ: ಜಿಒಬಿ (I)/585/2000. ದಿನಾಂಕ:09.07.2009
4) ಸರ್ಕಾರದ ಪತ್ರದ ಸಂ:ಲಾ 139 ಎಲ್‌ಸಿಇ 2009, ದಿನಾಂಕ: 09.07.2009
5) ಸರ್ಕಾರದ ಪತ್ರದ ಸಂ: ಲಾ 139 ಎಲ್‌ಸಿಇ 2009, ದಿನಾಂಕ: 30.07.2009
6) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಅರೆ ಸರ್ಕಾರಿ ಪತ್ರದ ಸಂಖ್ಯೆ: ಡಿಪಿಎನ್/ಸಿಶಾ 1/124/2009–10, ದಿನಾಂಕ:20.08.2009

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 25.01.2005ರ ಸರ್ಕಾರದ ಆದೇಶದಲ್ಲಿ 30 ತ್ವರಿತ ಗತಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸರ್ಕಾರಿ ಅಭಿಯೋಜಕರ 30 ಹುದ್ದೆಗಳನ್ನು ಸೃಜಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ :09.07.2009ರ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯರವರ ಪತ್ರದಲ್ಲಿ 29 ತ್ವರಿತ ಗತಿ ನ್ಯಾಯಾಲಯಗಳನ್ನು ಸ್ಥಳಾಂತರಿಸಲು ಕೋರಿದ್ದು, ಮೇಲೆ (4)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಅನುಮೋದನೆ ನೀಡಲಾಗಿದೆ. ಮುಂದುವರೆದು ಮೇಲೆ (5)ರಲ್ಲಿ ಓದಲಾದ ದಿನಾಂಕ: 30.07.2009ರ ಸರ್ಕಾರದ ಪತ್ರದಲ್ಲಿ 3 ತ್ವರಿತ ಗತಿ ನ್ಯಾಯಾಲಯಗಳನ್ನು ಸ್ಥಳಾಂತರಿಸಲು ಅನುಮೋದನೆಯನ್ನು ನೀಡಲಾಗಿದೆ.

ಮೇಲೆ (6)ರಲ್ಲಿ ಓದಲಾದ ದಿನಾಂಕ: 20.08.2009ರ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಅರೆ ಸರ್ಕಾರಿ ಪತ್ರದಲ್ಲಿ ಮೇಲೆ (4) ಮತ್ತು (5)ರಲ್ಲಿ ಓದಲಾದ ಸರ್ಕಾರದ ಪತ್ರಗಳನ್ವಯ ಸ್ಥಳಾಂತರಗೊಂಡಿರುವ ನ್ಯಾಯಾಲಯಗಳಲ್ಲಿ 9 ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಇಲಾಖೆಗೆ ಮಂಜೂರಾಗಿರುವ 9 ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಸದರಿ ನ್ಯಾಯಾಲಯಗಳು ಸ್ಥಳಾಂತರಗೊಂಡ ಸ್ಥಳಗಳಿಗೆ ಈ ಮುಂದಿನಂತೆ ಸ್ಥಳಾಂತರಿಸಲು ಕೋರಿರುತ್ತಾರೆ.

| | ಹಾಲಿ ಹುದ್ದೆಯು ಇರುವ ಸ್ಥಳ | ಹುದ್ದೆಯನ್ನು ಸ್ಥಳಾಂತರಿಸಲು ಕೋರಿರುವ ಸ್ಥಳ |
|---|---|---|
| 1 | 2ನೇ ತ್ವರಿತ ಗತಿ ನ್ಯಾಯಾಲಯ, ಬಾಗಲಕೋಟೆ | ತ್ವರಿತ ಗತಿ ನ್ಯಾಯಾಲಯ, ದೇವನಹಳ್ಳಿ |
| 2 | ತ್ವರಿತ ಗತಿ ನ್ಯಾಯಾಲಯ, ರಾಮದುರ್ಗ | ತ್ವರಿತ ಗತಿ ನ್ಯಾಯಾಲಯ, ಹುಕ್ಕೇರಿ |
| 3 | 3ನೇ ತ್ವರಿತ ಗತಿ ನ್ಯಾಯಾಲಯ, ಬೀದರ್ | ತ್ವರಿತ ಗತಿ ನ್ಯಾಯಾಲಯ, ಬೈಲಹೊಂಗಲ |
| 4 | 4ನೇ ತ್ವರಿತ ಗತಿ ನ್ಯಾಯಾಲಯ, ಕೋಲಾರ | ತ್ವರಿತ ಗತಿ ನ್ಯಾಯಾಲಯ, ಕೆಜಿಎಫ್ |
| 5 | 3ನೇ ತ್ವರಿತ ಗತಿ ನ್ಯಾಯಾಲಯ, ಮಂಡ್ಯ | ತ್ವರಿತ ಗತಿ ನ್ಯಾಯಾಲಯ, ಭದ್ರಾವತಿ |
| 6 | 4ನೇ ತ್ವರಿತ ಗತಿ ನ್ಯಾಯಾಲಯ, ಮಂಡ್ಯ | ತ್ವರಿತ ಗತಿ ನ್ಯಾಯಾಲಯ, ಕುಂದಾಪುರ |
| 7 | ತ್ವರಿತ ಗತಿ ನ್ಯಾಯಾಲಯ, ಕೊಳ್ಳೆಗಾಲ | ತ್ವರಿತ ಗತಿ ನ್ಯಾಯಾಲಯ, ರಾಣೆಬೆನ್ನೂರು |

| | ಹಾಲಿ ಹುದ್ದೆಯು ಇರುವ ಸ್ಥಳ | ಹುದ್ದೆಯನ್ನು ಸ್ಥಳಾಂತರಿಸಲು ಕೋರಿರುವ ಸ್ಥಳ |
|---|---|---|
| 8 | 3ನೇ ತ್ವರಿತ ಗತಿ ನ್ಯಾಯಾಲಯ, ರಾಯಚೂರು | ತ್ವರಿತ ಗತಿ ನ್ಯಾಯಾಲಯ, ಚಿಂತಾಮಣಿ |
| 9 | ತ್ವರಿತ ಗತಿ ನ್ಯಾಯಾಲಯ, ಚಾಮರಾಜನಗರ | ತ್ವರಿತ ಗತಿ ನ್ಯಾಯಾಲಯ, ಕೊಳ್ಳೇಗಾಲ |

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 377 ಪಿಪಿಇ 2009, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2009**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ, ಸ್ಥಳಾಂತರಗೊಂಡಿರುವ ತ್ವರಿತ ಗತಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಮಂಜೂರಾಗಿದ್ದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಈ ಕೆಳಕಂಡ ತಃಖ್ತೆಯ ಅಂಕಣ (2)ರಲ್ಲಿ ನಮೂದಿಸಿರುವ ಸ್ಥಳಗಳ 9 ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಅಂಕಣ (3)ರಲ್ಲಿ ನಮೂದಿಸಿರುವ ಸ್ಥಳಗಳಿಗೆ ಸ್ಥಳಾಂತರಿಸಿದೆ.

| ಕ್ರ. ಸಂ. | ಹುದ್ದೆಯು ಇದ್ದ ಸ್ಥಳ | ಹುದ್ದೆಯು ಸ್ಥಳಾಂತರಗೊಂಡಿರುವ ಸ್ಥಳ |
|---|---|---|
| 1 | 2ನೇ ತ್ವರಿತ ಗತಿ ನ್ಯಾಯಾಲಯ, ಬಾಗಲಕೋಟೆ | ತ್ವರಿತ ಗತಿ ನ್ಯಾಯಾಲಯ, ದೇವನಹಳ್ಳಿ |
| 2 | ತ್ವರಿತ ಗತಿ ನ್ಯಾಯಾಲಯ, ರಾಮದುರ್ಗ | ತ್ವರಿತ ಗತಿ ನ್ಯಾಯಾಲಯ, ಹುಕ್ಕೇರಿ |
| 3 | 3ನೇ ತ್ವರಿತ ಗತಿ ನ್ಯಾಯಾಲಯ, ಬೀದರ್ | ತ್ವರಿತ ಗತಿ ನ್ಯಾಯಾಲಯ, ಬೈಲಹೊಂಗಲ |
| 4 | 4ನೇ ತ್ವರಿತ ಗತಿ ನ್ಯಾಯಾಲಯ, ಕೋಲಾರ | ತ್ವರಿತ ಗತಿ ನ್ಯಾಯಾಲಯ, ಕೆಜಿಎಫ್ |
| 5 | 3ನೇ ತ್ವರಿತ ಗತಿ ನ್ಯಾಯಾಲಯ, ಮಂಡ್ಯ | ತ್ವರಿತ ಗತಿ ನ್ಯಾಯಾಲಯ, ಭದ್ರಾವತಿ |
| 6 | 4ನೇ ತ್ವರಿತ ಗತಿ ನ್ಯಾಯಾಲಯ, ಮಂಡ್ಯ | ತ್ವರಿತ ಗತಿ ನ್ಯಾಯಾಲಯ, ಕುಂದಾಪುರ |
| 7 | ತ್ವರಿತ ಗತಿ ನ್ಯಾಯಾಲಯ, ಕೊಳ್ಳೇಗಾಲ | ತ್ವರಿತ ಗತಿ ನ್ಯಾಯಾಲಯ, ರಾಣಿಬೆನ್ನೂರು |
| 8 | 3ನೇ ತ್ವರಿತ ಗತಿ ನ್ಯಾಯಾಲಯ, ರಾಯಚೂರು | ತ್ವರಿತ ಗತಿ ನ್ಯಾಯಾಲಯ, ಚಿಂತಾಮಣಿ |
| 9 | ತ್ವರಿತ ಗತಿ ನ್ಯಾಯಾಲಯ, ಚಾಮರಾಜನಗರ | ತ್ವರಿತ ಗತಿ ನ್ಯಾಯಾಲಯ, ಕೊಳ್ಳೇಗಾಲ |

ಸದರಿ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ:ಒಸಾಇ 54803 ಆಂಅಸ 2009, ದಿನಾಂಕ: 03.09.2009ರನ್ವಯ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರ ಕಂಡಿಕೆ (53)ರಲ್ಲಿ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರವನ್ನು ಚಲಾಯಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಪಿ.ಆರ್. 2432 ಸರ್ಕಾರದ ಅಧೀನ ಕಾರ್ಯದರ್ಶಿ ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗಗಳು)

**ವಿಷಯ:** 12ನೇ ಹಣಕಾಸು ಆಯೋಗದ ಯೋಜನೆಯಡಿಯಲ್ಲಿ ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಅನುದಾನ ಬಿಡುಗಡೆ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 08 ಪಿಎಫ್‌ಎಸ್ 2009 ದಿನಾಂಕ: 26–08–2009.

2. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ದೂರಸಂಪರ್ಕ ಸಾರಿಗೆ ಮತ್ತು ಆಧುನೀಕರಣ, ಇವರ ಪತ್ರ ಸಂಖ್ಯೆ: ಟಿಟಿಎಂ/12ನೇ ಹ.ಕಾ.ಆಯೋಗ/2008–09 ದಿನಾಂಕ:28/08/2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 12ನೇ ಹಣಕಾಸು ಯೋಜನೆಯಡಿಯಲ್ಲಿ ಪೊಲೀಸ್ ಆಡಳಿತವನ್ನು ಬಲಪಡಿಸಲು 2009–10ನೇ ಸಾಲಿನ ಪೂರಕ ಅಂದಾಜು–1ರಲ್ಲಿ ರೂ.2353.98 ಲಕ್ಷಗಳನ್ನು ಕಲ್ಪಿಸಲಾಗಿದ್ದು, ಸದರಿ ಅನುದಾನದಿಂದ ರೂ.10.00 ಕೋಟಿಗಳಿಗೆ ಮಂಜೂರಾತಿ ನೀಡಿ ಈ ಪೈಕಿ 6.25ಕೋಟಿ ರೂ.ಗಳನ್ನು ಪೇಯಿಸ್ ರಸೀದಿ ಮೇಲೆ ಡ್ರಾ ಮಾಡಿ ಕರ್ನಾಟಕ ರಾಜ್ಯ ಗೃಹ ನಿರ್ಮಾಣ ನಿಗಮ ನಿಯಮಿತ, ಬೆಂಗಳೂರು, ಇವರಲ್ಲಿ ಠೇವಣಿ ಇಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ ಓದಲಾದ (2)ರ ದಿನಾಂಕ:28/08/2009ರ ಪತ್ರದಲ್ಲಿ, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ದೂರಸಂಪರ್ಕ ಸಾರಿಗೆ ಮತ್ತು ಆಧುನೀಕರಣ, ರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, 12ನೇ ಹಣಕಾಸು ಆಯೋಗದ ಸಭೆಯಲ್ಲಿ ಭಾಗಶಃ ಮಾರ್ಪಾಡಿತ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿದ್ದು, ಅದರನ್ವಯ ರಾಜ್ಯ ಗುಪ್ತವಾರ್ತೆ ಶಾಖೆಗೆ ಬೇಕಾದ ಉಪಕರಣಗಳು ಹಾಗೂ ಗಣಕೀಕರಣದ ಅಡಿಯಲ್ಲಿ ಉಪಕರಣಗಳಿಗೆ ಅನುಮೋದನೆ ದೊರೆತಿದ್ದು, ಅದರಂತೆ

ಅನುದಾನ ಬಿಡುಗಡೆ ಮಾಡಬೇಕಾಗಿರುತ್ತದೆ. ಆದಕಾರಣ ರೂ.10.00ಕೋಟಿಗಳನ್ನು ರಾಜ್ಯ ಗುಪ್ತವಾರ್ತೆ ಶಾಖೆಗೆ ಬೇಕಾದ ಉಪಕರಣಗಳು ಹಾಗೂ ಗಣಕೀಕರಣ ಖರೀದಿಸಲು ಸಂಬಂಧಪಟ್ಟ ಅಧಿಕಾರಿಗಳಿಗೆ ಬಿಡುಗಡೆ ಮಾಡಲಾಗುವುದೆಂದು ತಿಳಿಸಿರುತ್ತಾರೆ.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ದೂರಸಂಪರ್ಕ ಸಾರಿಗೆ ಮತ್ತು ಆಧುನೀಕರಣರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 08 ಪಿಎಫ್‌ಎಸ್ 2009 ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿನಾಂಕ 26/08/2009ರ ಆದೇಶದಲ್ಲಿ ಬಿಡುಗಡೆ ಮಾಡಿದ ರೂ.10.00 ಕೋಟಿಗಳ ಪೈಕಿ 6.25 ಕೋಟಿಗಳನ್ನು ಪೇಯೀಸ್ ರಸೀದಿ ಮೇಲೆ ಡ್ರಾ ಮಾಡಿ ಕರ್ನಾಟಕ ರಾಜ್ಯ ಗೃಹ ನಿರ್ಮಾಣ ನಿಗಮ ನಿಯಮಿತ, ಬೆಂಗಳೂರು ಇವರಲ್ಲಿ ಠೇವಣಿ ಇಡಲು ನೀಡಿರುವ ಮಂಜೂರಾತಿ ಆದೇಶವನ್ನು ಮಾರ್ಪಡಿಸಿ ಸದರಿ ರೂ.6.25ಕೋಟಿ ಹಾಗೂ ಉಳಿದ ರೂ.3.75ಕೋಟಿ ಒಟ್ಟು ರೂ.10.00 ಕೋಟಿಗಳನ್ನು (ಹತ್ತು ಕೋಟಿ ರೂಪಾಯಿಗಳನ್ನು ಮಾತ್ರ) ರಾಜ್ಯ ಗುಪ್ತವಾರ್ತೆ ಶಾಖೆಗೆ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಬೇಕಾದ ಉಪಕರಣಗಳು ಹಾಗೂ ಗಣಕೀಕರಣಗಳ ಉಪಕರಣಗಳನ್ನು ಖರೀದಿಸಲು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಮುಂದುವರೆದು, ಇನ್ನು ಮುಂದೆ ಅನುದಾನದ ಬಿಡುಗಡೆಯ ಕನಿಷ್ಟ ಪಕ್ಷ 70.00ಕೋಟಿ ರೂ.ಗಳ ವೆಚ್ಚವನ್ನು ಮಾಡಿ ಬಳಕೆ ಪ್ರಮಾಣ ಪತ್ರ ಒದಗಿಸಿದ ನಂತರವೇ ಬಾಕಿ ಅನುದಾನವನ್ನು ಬಿಡುಗಡೆ ಮಾಡಲು ಪರಿಗಣಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 524 ವೆಚ್ಚ 11/09 ದಿನಾಂಕ: 23/09/2009ರ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2433

**ಬಿ.ಎಂ. ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಮೋತಿರಾಂ ಪವಾರ್, ಜಂಟಿ ಕಾರ್ಯದರ್ಶಿ (ದಿವಂಗತ) ಇವರ ವಿರುದ್ಧ ಇಲಾಖಾ ವಿಚಾರಣೆ–ಮಂಡನಾಧಿಕಾರಿ ನೇಮಕ–ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 103 ಎಸ್‌ಇಎನ್ 2001, ದಿನಾಂಕ: 11–6–2003

2. ಅ.ಟಿ.ಸಂಖ್ಯೆ ಸಿಆಸುಇ 576 ಪಿಎಫ್‌ಎಸ್ 95, ದಿನಾಂಕ 1–10–2009, ಉಪಕಾರ್ಯದರ್ಶಿ, ಸಿಆಸುಇ (ಆಡಳಿತ ಸುಧಾರಣೆ) ಇವರಿಂದ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 11–6–2003ರ ಸರ್ಕಾರಿ ಆದೇಶದಲ್ಲಿ ಶ್ರೀ ಮೋತಿರಾಂ ಪವಾರ್, ಜಂಟಿ ಕಾರ್ಯದರ್ಶಿ (ದಿವಂಗತ) ಇವರ ವಿರುದ್ಧ ಇಲಾಖಾ ವಿಚಾರಣೆಯಲ್ಲಿ ಶ್ರೀ ಮಾಧವರೆಡ್ಡಿ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿಯೂ, ಶ್ರೀ ಹೆಚ್.ಕೃಷ್ಣಮೂರ್ತಿ, ಉಪಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ) ಅವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಕ ಮಾಡಲಾಗಿತ್ತು, ಉಪಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ) ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ:1.10.2009ರ ಅನಧಿಕೃತ ಟಿಪ್ಪಣಿಯಲ್ಲಿ ಶ್ರೀ ಹೆಚ್.ಕೃಷ್ಣಮೂರ್ತಿ ಅವರು ವಯೋ ನಿವೃತ್ತಿ ಹೊಂದಿದ್ದು ಬದಲಿ ಮಂಡನಾಧಿಕಾರಿಯನ್ನು ನೇಮಿಸದೆ ಪ್ರಕರಣವನ್ನು ಮಂಡಿಸಲು ತಮಗೆ ಸಾಧ್ಯವಾಗದಿರುವ ಕಾರಣ ತಮ್ಮನ್ನು ಮಂಡನಾಧಿಕಾರಿಯಾಗಿ ನೇಮಿಸಿ ಪರಿಷ್ಕೃತ ಆದೇಶ ಹೊರಡಿಸಬೇಕಾಗಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 108 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶಗಳ ಹಿನ್ನೆಲೆಯಲ್ಲಿ ದಿನಾಂಕ: 11–06–2003ರ ಸರ್ಕಾರಿ ಆದೇಶವನ್ನು ಮಾರ್ಪಡಿಸಿ ಉಪಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ) ಅವರನ್ನು ಈ ಪ್ರಕರಣದಲ್ಲಿ ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ದಿನಾಂಕ: 11–6–2003ರ

ಆದೇಶದಲ್ಲಿ ಈಗಾಗಲೇ ನಿರ್ದೇಶಿಸಿರುವಂತೆ ಎಲ್ಲಾ ಸಹಕಾರಗಳನ್ನು ನೀಡುವುದರೊಂದಿಗೆ ಪ್ರಕರಣವನ್ನು ಮಂಡಿಸಿ 6 ತಿಂಗಳ ಒಳಗಾಗಿ ವಿಚಾರಣೆಯನ್ನು ಮುಕ್ತಾಯಗೊಳಿಸಿ ವರದಿ ಸಲ್ಲಿಸಲು ಎಲ್ಲಾ ಕ್ರಮಗಳನ್ನು ಕೈಗೊಳ್ಳುತ್ತಾರೆ.

ಉಳಿದಂತೆ ಶ್ರೀ ಮಾಧವರೆಡ್ಡಿ, ನಿವೃತ್ತ ನ್ಯಾಯಾಧಿಶರೇ ವಿಚಾರಣಾಧಿಕಾರಿಯಾಗಿ ಮುಂದುವರೆಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಪಿ.ಆರ್. 2434

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಕೃಷಿ ಸಚಿವಾಲಯ

**ವಿಷಯ:** ಶ್ರೀ ನಾಗರಾಜರಾವ್, ಸಹಾಯಕ ಕೃಷಿ ನಿರ್ದೇಶಕರು, ಹೊಸನಗರ, ಶಿವಮೊಗ್ಗ ಜಿಲ್ಲೆ ಇವರಿಗೆ ಸ್ವ–ಇಚ್ಛಾ ನಿವೃತ್ತಿ ಹೊಂದಲು ಅನುಮತಿ.

**ಓದಲಾಗಿದೆ:** 1) ಕೃಷಿ ಆಯುಕ್ತರ ಪತ್ರ ಸಂ:ಕೃಷಿಪ–1/28/2009–10, ದಿನಾಂಕ: 17–09–2009

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಕೃಷಿ ಆಯುಕ್ತ ಪ್ರಸ್ತಾವನೆಯಲ್ಲಿ ಶ್ರೀ ಎನ್.ನಾಗರಾಜರಾವ್, ಸಹಾಯಕ ಕೃಷಿ ನಿರ್ದೇಶಕರು, ಹೊಸನಗರ, ಶಿವಮೊಗ್ಗ ಜಿಲ್ಲೆ, ಇವರು ಕೌಟುಂಬಿಕ ಕಾರಣಗಳಿಂದಾಗಿ ಸ್ವಯಂ ನಿವೃತ್ತಿ ಹೊಂದಲು ಅನುಮತಿ ಕೋರಿ ಸಲ್ಲಿಸಿರುವ ದಿನಾಂಕ:19–06–2009ರ ಮನವಿಯೊಂದಿಗೆ ಸದರಿ ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಗಳು ಬಾಕಿ ಇರುವುದಿಲ್ಲವಾದ್ದರಿಂದ ಬಾಕಿ/ಬೇಬಾಕಿ ಪತ್ರಗಳ ನಿರೀಕ್ಷಣ ಷರತ್ತುಗಳಿಗೊಳಪಟ್ಟು ದಿನಾಂಕ:30–09–2009ರಿಂದ ಅನ್ವಯಿಸುವಂತೆ ಸ್ವ–ಇಚ್ಛಾ ನಿವೃತ್ತಿಗೆ ಅನುಮತಿ ನೀಡಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 170 ಕೃಪಸೇ 2009, ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎನ್.ನಾಗರಾಜರಾವ್, ಸಹಾಯಕ ಕೃಷಿ ನಿರ್ದೇಶಕರು, ಹೊಸನಗರ, ಶಿವಮೊಗ್ಗ ಜಿಲ್ಲೆ ಇವರಿಗೆ ಅವರಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಇದ್ದರೆ ಅದನ್ನು ಅವರಿಗೆ ನೀಡಬೇಕಾದ ನಿವೃತ್ತಿ ಸವಲತ್ತುಗಳಿಂದ ವಸೂಲಿ ಮಾಡುವ ಷರತ್ತಿಗೊಳಪಟ್ಟು ದಿನಾಂಕ:31–10–2009ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 285(1)(ಬಿ) ಅನ್ವಯ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2435

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಬಗ್ಗೆ

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಜವಿ 2008, ದಿನಾಂಕ 19–1–2009

2. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಜವಿ 2008, ದಿನಾಂಕ 30–03–2009
3. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಜವಿ 2008, ದಿನಾಂಕ 22–06–2009
4. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಜವಿ 2008, ದಿನಾಂಕ 26–09–2009
5. ಮಾತಂ ಜೈತಂ ನಿರ್ದೇಶನಾಲಯದ ನಿರ್ದೇಶಕರ ಪತ್ರ ಸಂಖ್ಯೆ ಕೆಬಿಟ್ಸ್/ಕೈಗೂ.ಅ/ಬಿಪಿಓ ಅನುದಾನ/ 2009–10 ದಿನಾಂಕ: 3–10–2009

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು 1 ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ತಾಲೂಕು/ಹೋಬಳಿ ಕೇಂದ್ರ ಸ್ಥಳಗಳಲ್ಲಿ ಗ್ರಾಮಾಂತರ ಬಿ.ಪಿ.ಓ ಕೇಂದ್ರಗಳನ್ನು ಸ್ಥಾಪಿಸುವ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲು ಹಾಗೂ 100 ವ್ಯಕ್ತಿಗಳಿಗೆ ಕಡಿಮೆ ಇಲ್ಲದಂತೆ ನೇರ ಉದ್ಯೋಗವನ್ನು ನೀಡುವ ಗ್ರಾಮೀಣ ಬಿ.ಪಿ.ಓ. ಕೇಂದ್ರವು ರಾಜ್ಯ ಸರ್ಕಾರದಿಂದ ಆರ್ಥಿಕ ಬೆಂಬಲಕ್ಕೆ ಅರ್ಹವಾಗಿರುವ ಬಗ್ಗೆ ಆದೇಶ ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಉದ್ದೇಶಕ್ಕಾಗಿ 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"5465–01–190–1–14 ಗ್ರಾಮೀಣ ಬಿಪಿಓಗಳು 059 ಇತರೆ ಖರ್ಚು [ಯೋಜನೆ]"** ಇದರಡಿಯಲ್ಲಿ ರೂ.100 ಲಕ್ಷಗಳನ್ನು (ರೂ.ನೂರು ಲಕ್ಷಗಳು ಮಾತ್ರ) ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ಸ್ಕ್ರೀನಿಂಗ್ ಕಮಿಟಿಯ ಶಿಫಾರಸ್ಸಿನಂತೆ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ 2009–10ನೇ ಸಾಲಿನಲ್ಲಿ ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನಾಲ್ಕು ಅರ್ಹ ಅಭ್ಯರ್ಥಿಗಳ ಪ್ರಸ್ತಾವನೆ ಮತ್ತು (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಎಂಟು ಅರ್ಹ ಅಭ್ಯರ್ಥಿಗಳ ಪ್ರಸ್ತಾವನೆಗೆ ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

2009–10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ **"5465–01–190–1–14 ಗ್ರಾಮೀಣ ಬಿಪಿಓಗಳು 059 ಇತರೆ ಖರ್ಚು [ಯೋಜನೆ]"** ಇದರಡಿಯಲ್ಲಿ ರೂ.500 ಲಕ್ಷಗಳ ಅನುದಾನವನ್ನು ಒದಗಣೆ ಮಾಡಲಾಗಿದೆ.

ಮೇಲೆ (5)ರಲ್ಲಿ ಓದಲಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ನಿರ್ದೇಶಕರ ಪತ್ರದಲ್ಲಿ ಪ್ರಾರಂಭವಾಗಲಿರುವ ಬಿಪಿಓ ಕೇಂದ್ರಗಳಿಗೆ ಆರ್ಥಿಕ ಬೆಂಬಲವನ್ನು ಬಿಡುಗಡೆ ಮಾಡುವ ಸಲುವಾಗಿ ರೂ.500 ಲಕ್ಷಗಳ ಅನುದಾನವನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ಕೋರಿದ್ದು, ಸದ್ಯಕ್ಕೆ ರೂ.100 ಲಕ್ಷಗಳನ್ನು ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 39 ಎಂಡಿಎ 2008, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ಹೇಳಿರುವ ಸಂದರ್ಭದಲ್ಲಿ ಪ್ರಾರಂಭವಾಗಲಿರುವ ಬಿಪಿಓ ಕೇಂದ್ರಗಳಿಗೆ ಆರ್ಥಿಕ ಬೆಂಬಲವನ್ನು ಬಿಡುಗಡೆ ಮಾಡುವ ಸಲುವಾಗಿ 2009–10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ "5465–01–190–1–14 ಗ್ರಾಮೀಣ ಬಿಪಿಓಗಳು–059–ಇತರೆ ಖರ್ಚು (ಯೋಜನೆ)" ಇದರಡಿಯಲ್ಲಿ ಒದಗಿಸಲಾಗಿರುವ ರೂ.500 ಲಕ್ಷಗಳ ಅನುದಾನದಲ್ಲಿ ರೂ.100 ಲಕ್ಷಗಳನ್ನು (ರೂ. ನೂರು ಲಕ್ಷಗಳು ಮಾತ್ರ) ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಪ್ರಧಾನ ವ್ಯವಸ್ಥಾಪಕರು, ಕೆಬಿಟ್ಸ್ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '5465–01–190–1–14 ಗ್ರಾಮೀಣ ಬಿಪಿಓಗಳು 059 ಇತರೆ ಖರ್ಚು (ಯೋಜನೆ)' ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು,

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಪ್ರಧಾನ ವ್ಯವಸ್ಥಾಪಕರು, ಕೆಬಿಟ್ಸ್ ಸಂಸ್ಥೆ ಇವರಿಂದ (ಸಂಬಂಧಪಟ್ಟ ಗ್ರಾಮೀಣ ಬಿಪಿಓ ಕೇಂದ್ರಗಳಿಂದ ಉಪಯೋಗಿತಾ ದೃಢೀಕರಣ ಪತ್ರಗಳನ್ನು ವೆಚ್ಚ ಮಾಡಿದ ಅನುದಾನದ ವಿವರಗಳೊಂದಿಗೆ ಪಡೆದು) ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಆಇ 1 ಟಿಎಫ್‌ಪಿ 2008, ದಿನಾಂಕ: 16–5–2008ರನ್ವಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 2440

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ವಿಷಯ:** ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಬಗ್ಗೆ

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ: 19–1–2009
2. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, [1] ದಿನಾಂಕ: 4–2–2009
3. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, [2] ದಿನಾಂಕ: 4–2–2009
4. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ: 30–3–2009
5. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ: 22–06–2009
6. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ: 26–09–2009
7. ನಿರ್ದೇಶಕರು ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಹಾಗೂ ಅಧ್ಯಕ್ಷರು, ಬಿಪಿಓ ಸ್ಕ್ರೀನಿಂಗ್ ಕಮಿಟಿ ಇತರ ಪತ್ರದ ಸಂಖ್ಯೆ: ಕೆಬಿಟ್ಸ್/ಪಿಇ/ ಗ್ರಾಮೀಣ ಬಿಪಿಓ ಕೇಂದ್ರ/ 42/09–10, ದಿನಾಂಕ: 23–10–2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಒಂದು ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ತಾಲ್ಲೂಕು/ ಹೋಬಳಿ ಕೇಂದ್ರ ಸ್ಥಳಗಳಲ್ಲಿ ಗ್ರಾಮಾಂತರ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಹೊಸ ಯೋಜನೆಗೆ 2008–09ನೇ ಸಾಲಿನಿಂದ ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ ಹಾಗೂ ಅರ್ಜಿಯ ನಮೂನೆಯನ್ನು ನಿಗದಿಪಡಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಸಂಬಂಧದ ಅರ್ಜಿಗಳನ್ನು ಪರಿಶೀಲಿಸಿ, ಸರ್ಕಾರಕ್ಕೆ ಅರ್ಹ ಅರ್ಜಿಗಳನ್ನು ಶಿಫಾರಸ್ಸು ಮಾಡುವ ಸಂಬಂಧ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸ್ಕ್ರೀನಿಂಗ್ ಕಮಿಟಿಯನ್ನು ರಚಿಸಲಾಗಿದೆ.

ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಉದ್ದೇಶಕ್ಕಾಗಿ 2008–09ನೇ ಸಾಲಿನಲ್ಲಿ ರೂ.100 ಲಕ್ಷಗಳನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ (5)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ ಗ್ರಾಮೀಣ ಬಿಪಿಓ ಯೋಜನೆಯಡಿಯಲ್ಲಿ 2009–10ನೇ ಸಾಲಿನಲ್ಲಿ ನಾಲ್ಕು ಅರ್ಹ ಅಭ್ಯರ್ಥಿಗಳ ಪ್ರಸ್ತಾವನೆಗೆ ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಮೇಲೆ (6)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ ಗ್ರಾಮೀಣ ಬಿಪಿಓ ಯೋಜನೆಯಡಿಯಲ್ಲಿ 2009–10ನೇ ಸಾಲಿನಲ್ಲಿ ಎಂಟು ಅರ್ಹ ಅಭ್ಯರ್ಥಿಗಳ ಪ್ರಸ್ತಾವನೆಗೆ ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಮೇಲೆ (7)ರಲ್ಲಿ ಓದಲಾದ ನಿರ್ದೇಶಕರು ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಪತ್ರದಲ್ಲಿ ಸರ್ಕಾರದ ಮಾರ್ಗಸೂಚಿಯನ್ವಯ ಕೆಬಿಟ್ಸ್ ಸಂಸ್ಥೆಯವರು ಅರ್ಜಿಗಳನ್ನು ಆಹ್ವಾನಿಸಿದ್ದು, ನಿಗದಿಪಡಿಸಿದ ಕೊನೆಯ ದಿನಾಂಕ:9.10.2009 ರೊಳಗೆ 141 ಅರ್ಜಿಗಳನ್ನು ಸ್ವೀಕರಿಸಲಾಗಿದ್ದು, ಸದರಿ ಅರ್ಜಿಗಳನ್ನು ಸರ್ಕಾರಿ ಆದೇಶ ದಿನಾಂಕ: 4.2.2009ರಲ್ಲಿ ರಚಿಸಲಾದ ಸ್ಕ್ರೀನಿಂಗ್ ಕಮಿಟಿಯು ಸರ್ಕಾರದ ಮಾರ್ಗಸೂಚಿಯನ್ವಯ ಅರ್ಜಿಗಳನ್ನು ಪರಿಶೀಲಿಸಿ ಅರ್ಹರಾದ 17 ಅರ್ಜಿದಾರರನ್ನು ವೈಯಕ್ತಿಕ ಸಂದರ್ಶನ ನಡೆಸಿ, ಈ ಕೆಳಕಂಡ ಎಂಟು ಅರ್ಹ ಅಭ್ಯರ್ಥಿಗಳ ಅರ್ಜಿಗಳನ್ನು ಶಿಫಾರಸ್ಸು ಮಾಡಿ ಸರ್ಕಾರದಿಂದ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

| ಕ್ರ. ಸಂ. | ಆಯ್ಕೆಯಾದ ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಬಿಪಿಓ ಕೇಂದ್ರ ತೆರೆಯಲು ಉದ್ದೇಶಿಸಿರುವ ಸ್ಥಳ |
|---|---|---|
| 1 | ಶ್ರೀ ಅರುಣ, ಯು,ಮೆ:ಕ್ಯಾಚೆ ಸಲ್ಯೂಷನ್ | ಜಗಳೂರ್, ದಾವಣಗೆರೆ ಜಿಲ್ಲೆ |
| 2 | ಮೆ:ರೂರಲ್ ಶೋರ್ಸ್ ಬ್ಯೂಸಿನೆಸ್ ಸರ್ವೀಸಸ್ ಪ್ರೈ.ಲಿ | ಮುದ್ದೇನಹಳ್ಳಿ–562101, ಚಿಕ್ಕಬಳ್ಳಾಪುರ ಜಿಲ್ಲೆ |
| 3 | ಮೆ:ಟಾಟಾ ಬ್ಯೂಸಿನೆಸ್ ಸಪೋರ್ಟ್ ಸರ್ವೀಸಸ್ ಲಿ, | ಭಾಲ್ಕಿ/ಔರಾದ್, ಬೀದರ್ ಜಿಲ್ಲೆ |
| 4 | ಶ್ರೀ ಟಿ.ಈಶ್ವರ್ (ಈಶ್ವರಪ್ಪ ಯು ತಳವಾರ್) | ಲಕ್ಷ್ಮೇಶ್ವರ, ಶಿರಹಟ್ಟಿ ತಾ, ಗದಗ ಜಿಲ್ಲೆ |
| 5 | ಮೆ: ಸಾನ್ವಿ ಇನ್ಫೋಟೆಕ್ (ಪ್ರದೀಪ್ ಆರ್) | ಹುಣಸೂರು ಟೌನ್, ಮೈಸೂರು ಜಿಲ್ಲೆ |
| 6 | ಮೆ:ರೂರಲ್ ಶೋರ್ಸ್ ಬ್ಯೂಸಿನೆಸ್ ಸರ್ವೀಸಸ್ ಪ್ರೈ.ಲಿ | ಬೆಟ್ಟಮಕ್ಕಿ, ಸೀಬಿನಕೆರೆ ಅಂಚೆ, ತೀರ್ಥಹಳ್ಳಿ, 577432, ಶಿವಮೊಗ್ಗ ಜಿಲ್ಲೆ. |
| 7 | ಕುಮಾರಿ ಶ್ವೇತಾ ಎಸ್.ನಂದಿಹಾಳ | ಇಲಕಲ್, ಬಾಗಲಕೋಟೆ ಜಿಲ್ಲೆ |
| 8 | ಶ್ರೀಮತಿ ಅಶ್ವಿನಿ ಎಸ್.ಕುಮಾರ್ | ಶಂಕರಘಟ್ಟ, ಚಿಕ್ಕಮಗಳೂರು ಜಿಲ್ಲೆ |

ಸ್ಕ್ರೀನಿಂಗ್ ಕಮಿಟಿಯ ಶಿಫಾರಸ್ಸಿನಂತೆ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ ಮೇಲಿನ ಎಂಟು ಅಭ್ಯರ್ಥಿಗಳ ಪ್ರಸ್ತಾವನೆಗಳನ್ನು ಅನುಮೋದಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 39 ಎಂಡಿಎ 2008, ಬೆಂಗಳೂರು, ದಿನಾಂಕ: 24ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ಹೇಳಿರುವ ಸಂದರ್ಭದಲ್ಲಿ ಗ್ರಾಮೀಣ ಬಿಪಿಓ ಯೋಜನೆಯಡಿಯಲ್ಲಿ 2009–10ನೇ ಸಾಲಿನಲ್ಲಿ ಅನುಬಂಧ 'ಅ'ರಲ್ಲಿ ವಿವರಿಸಿರುವ ಎಂಟು ಅರ್ಹ ಅಭ್ಯರ್ಥಿಗಳ ಪ್ರಸ್ತಾವನೆಗೆ ಈ ಕೆಳಕಂಡ ನಿಬಂಧನೆ ಮೇರೆಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಕೆಬಿಟ್ಸ್ ಸಂಸ್ಥೆಯವರು ಮೇಲೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರದ ಆದೇಶಗಳನ್ವಯ ಹಾಗು ಮಾರ್ಗಸೂಚಿಯಂತೆ ಗ್ರಾಮೀಣ ಬಿಪಿಓ ಕೇಂದ್ರಗಳಿಗೆ ಪ್ರಗತಿಗೆ ಅನುಗುಣವಾಗಿ ಕಾಲಕಾಲಕ್ಕೆ ಹಂತಹಂತವಾಗಿ ಹಣ ಬಿಡುಗಡೆ ಮಾಡತಕ್ಕದ್ದು.
2. ಗ್ರಾಮೀಣ ಬಿಪಿಓ ಕಾರ್ಯವೈಖರಿಯನ್ನು ಆಗಿಂದಾಗ್ಗೆ ತಪಾಸಣೆ ಮಾಡಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.
3. ಬಿಪಿಓ ಕೇಂದ್ರಗಳಿಂದ ವಿನಿಯೋಗಿತ ಪತ್ರಗಳನ್ನು ಪಡೆದು ಸರ್ಕಾರಕ್ಕೆ ಸಕಾಲದಲ್ಲಿ ಸಲ್ಲಿಸತಕ್ಕದ್ದು.
4. ಗ್ರಾಮೀಣ ಬಿಪಿಓ ಕೇಂದ್ರಗಳಿಗೆ ಬಿಡುಗಡೆ ಮಾಡುವ ಹಣ ದುರುಪಯೋಗವಾಗದಂತೆ ಹಾಗೂ ಯೋಜನೆಯ ಅನುಷ್ಠಾನವನ್ನು ಮಧ್ಯದಲ್ಲಿ ರದ್ದುಪಡಿಸಿದರೆ ಸರ್ಕಾರದಿಂದ ನೀಡಲಾದ ಆರ್ಥಿಕ ಸೌಲಭ್ಯಗಳನ್ನು ವಸೂಲಿ ಮಾಡುವ ಬಗ್ಗೆ/ ಮೂಲಭೂತ ಸೌಕರ್ಯವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಕರಾರಿನಲ್ಲಿ ಸೂಕ್ತ ನಿಬಂಧನೆಗಳನ್ನು ವಿಧಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ ಐಟಡಿ 39 ಎಂಡಿಎ 2008, ಬೆಂಗಳೂರು ದಿನಾಂಕ: 24–10–2009**

**ಅನುಬಂಧ–ಅ**

| ಕ್ರಮ ಸಂಖ್ಯೆ | ಆಯ್ಕೆಯಾದ ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಬಿಪಿಓ ಕೇಂದ್ರ ತೆರೆಯಲು ಉದ್ದೇಶಿಸಿರುವ ಸ್ಥಳ |
|---|---|---|
| 1 | ಶ್ರೀ ಅರುಣ, ಯು, ತಂದೆ ಉಮಾಪತಿ,<br>ಮೆ:ಕ್ಯಾಚೆ ಸಲ್ಯೂಷನ್ಸ್ ಬಿದರಕೆರೆ, ತಾ.ಜಗಳೂರ್,<br>ಜಿ:ದಾವಣಗೆರೆ –577521 | ಜಗಳೂರ್, ದಾವಣಗೆರೆ ಜಿಲ್ಲೆ |
| 2 | ಮೆ:ರೂರಲ್ ಶೋರ್ಸ್ ಬ್ಯೂಸಿನೆಸ್ ಸರ್ವಿಸಸ್ ಪ್ರೈ.ಲಿ<br>ನಂ.135/2 ಮಾರುತಿ ಇಂಡಸ್ಟ್ರೀಯಲ್ ಎಸ್ಟೇಟ್, ರಾಜಪಾಳ್ಯ ಹೂಡಿ<br>ಐಟಿಪಿಎಲ್ ರಸ್ತೆ, ವೈಟ್‌ಫೀಲ್ಡ್ ಬೆಂಗಳೂರು–560048 | ಮುದ್ದೇನಹಳ್ಳಿ –562101,<br>ಚಿಕ್ಕಬಳ್ಳಾಪುರ ಜಿಲ್ಲೆ |
| 3 | ಮೆ:ಟಾಟಾ ಬ್ಯೂಸಿನೆಸ್ ಸಪೋರ್ಟ್ ಸರ್ವಿಸಸ್ ಲಿ,<br>ಗೌರಾ ಟ್ರಿನಿಟಿ, ಚಿರಾನ್ ಪೋರ್ಟ್ ಲೇನ್, ಬೇಗಂ ಪೇಟ್,<br>ಹೈದರಾಬಾದ್ –500016 | ಭಾಲ್ಕಿ/ಔರಾದ್, ಬೀದರ್ ಜಿಲ್ಲೆ |
| 4 | ಶ್ರೀ ಟಿ.ಈಶ್ವರ್ (ಈಶ್ವರಪ್ಪ ಯು ತಳವಾರ್)<br>ಚಂದನ್ ಎಜ್ಯೂಕೇಷನ್ ಸೊಸೈಟಿ, ಚಂದನ್ ಕ್ಯಾಂಪಸ್, ಲಕ್ಷ್ಮೇಶ್ವರ,<br>ಶಿರಹಟ್ಟಿ ತಾ. ಜಿಲ್ಲೆ, ಗದಗ–582116 | ಲಕ್ಷ್ಮೇಶ್ವರ, ಶಿರಹಟ್ಟಿ ತಾ, ಗದಗ ಜಿಲ್ಲೆ |
| 5 | ಮೆ: ಸಾನ್ವಿ ಇನ್ಫೋಟೆಕ್ (ಪ್ರದೀಪ್ ಆರ್)<br>ನಂ.2471, 3ನೇ ಮೇನ್, 4ನೇ ಕ್ರಾಸ್, ವಿನಾಯಕ ನಗರ,<br>ಮೈಸೂರು–570012 | ಹುಣಸೂರು ಟೌನ್, ಮೈಸೂರು ಜಿಲ್ಲೆ |
| 6 | ಮೆ:ರೂರಲ್ ಶೋರ್ಸ್ ಬ್ಯೂಸಿನೆಸ್ ಸರ್ವಿಸಸ್ ಪ್ರೈ.ಲಿ<br>ನಂ.135/2 ಮಾರುತಿ ಇಂಡಸ್ಟ್ರೀಯಲ್ ಎಸ್ಟೇಟ್, ರಾಜಪಾಳ್ಯ ಹೂಡಿ<br>ಐಟಿಪಿಎಲ್ ರಸ್ತೆ, ವೈಟ್‌ಫೀಲ್ಡ್, ಬೆಂಗಳೂರು–560048 | ಬೆಟ್ಟಮಕ್ಕಿ, ಸೀಬಿನಕೆರೆ ಅಂಚೆ,<br>ತೀರ್ಥಹಳ್ಳಿ, 577432, |
| 7 | ಕುಮಾರಿ ಶ್ವೇತಾ ಎಸ್.ನಂದಿಹಾಳ ಕೇ/ಆಫ್ ಡಾ.ಕೆ.ವಿ.ಅಕ್ಕಿ,<br>ಪರಿವೀಕ್ಷಣ ಮಂದಿರ ಎದುರುಗಡೆ ಬಸ್ ನಿಲ್ದಾಣದ ಹತ್ತಿರ,<br>ಇಲಕಲ್ ಜಿ.ಬಾಗಲಕೋಟೆ–587125 | ಇಲಕಲ್, ಬಾಗಲಕೋಟೆ ಜಿಲ್ಲೆ |

| ಕ್ರಮ ಸಂಖ್ಯೆ | ಆಯ್ಕೆಯಾದ ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಬಿಪಿಓ ಕೇಂದ್ರ ತೆರೆಯಲು ಉದ್ದೇಶಿಸಿರುವ ಸ್ಥಳ |
|---|---|---|
| 8 | ಶ್ರೀಮತಿ ಅಶ್ವಿನಿ ಎಸ್.ಕುಮಾರ್<br>ಮೆ: ಗ್ಲೋಪೋರ್ ಐಎಮ್ ಸರ್ವೀಸಸ್ ಪ್ರೈ.ಲಿ ನಂ.85,<br>4ನೇ 'ಎ' ಕ್ರಾಸ್, 36ನೇ ಮೇನ್, ಬಿಟಿಎಂ 1ನೇ ಹಂತ, ಡಾಲರ್ಸ್,<br>ಸ್ಕೀಮ್, ಬೆಂಗಳೂರು–560068. | ಶಂಕರಘಟ್ಟ, ಚಿಕ್ಕಮಗಳೂರು ಜಿಲ್ಲೆ |

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 2441 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ರಾಜ್ಯದಲ್ಲಿ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು ಮತ್ತು ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗಳ ನಿರ್ವಹಣೆ ಬಗ್ಗೆ.

**ಪ್ರಸ್ತಾವನೆ:**

ಡಾ॥ ಬಿ.ಆರ್.ಅಂಬೇಡ್ಕರ್ ಶತಾಬ್ದಿ ಮಹೋತ್ಸವದ ಸಂದರ್ಭದಲ್ಲಿ 04 ವಸತಿ ಶಾಲೆಗಳನ್ನು ನವೋದಯ ಶಾಲೆಗಳ ಮಾದರಿಯಲ್ಲಿ ಕಂದಾಯ ವಿಭಾಗಕ್ಕೆ ಒಂದರಂತೆ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದವರಿಗಾಗಿ ಪ್ರಾರಂಭಿಸಿದ್ದು ನಂತರ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗಾಗಿ ಸಹ ಅಂತಹ ಶಾಲೆಗಳನ್ನು ತೆರೆಯಲಾಗಿದೆ. ರಾಜ್ಯದಲ್ಲಿ ಈಗ 385 ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು ಇವೆ.

ಜಿಲ್ಲಾ ಮಟ್ಟದಲ್ಲಿ ಪ್ರವೇಶ ಪರೀಕ್ಷೆಯನ್ನು ನಡೆಸಿ ಪ್ರತಿಭಾವಂತ ಗ್ರಾಮೀಣ ವಿದ್ಯಾರ್ಥಿಗಳನ್ನು ಈ ಶಾಲೆಗಳಲ್ಲಿ ದಾಖಲಿಸಲಾಗುತ್ತಿದೆ. 6ನೇ ತರಗತಿಗೆ ವಿದ್ಯಾರ್ಥಿಗಳನ್ನು ದಾಖಲಿಸಿಕೊಳ್ಳಲಾಗುತ್ತಿದ್ದು, 10ನೇ ತರಗತಿವರೆಗೂ ವಿದ್ಯಾಭ್ಯಾಸ ಮಾಡುತ್ತಾರೆ. ಪ್ರತಿ ತರಗತಿ 50 ವಿದ್ಯಾರ್ಥಿಗಳ ಸಂಖ್ಯಾಬಲ ಹೊಂದಿದ್ದು ರಾಜ್ಯ ಸರ್ಕಾರವು ಎಲ್ಲಾ ವಿದ್ಯಾರ್ಥಿಗಳಿಗೆ ಉಚಿತ ಊಟ ಮತ್ತು ವಸತಿ ಒದಗಿಸಲಾಗುತ್ತಿದೆ.

ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 532 ಎಸ್‌ಇಡಬ್ಲ್ಯೂ 96, ದಿನಾಂಕ 06–10–1999 ರ ಮೇರೆಗೆ ಎಲ್ಲಾ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ನಿರ್ವಹಣೆಯನ್ನು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘವು ನಿರ್ವಹಿಸುತ್ತಿತ್ತು. ಸದರಿ ಸಂಘವು ಸಂಘಗಳ ನೋಂದಣಿ ಅಧಿನಿಯಮ (1960) ದ ಅಡಿ ನೊಂದಣಿಯಾಗಿದ್ದು ದಿನಾಂಕ: 2–2–2000ರಿಂದ ಕಾರ್ಯನಿರ್ವಹಿಸುತ್ತಿದೆ. ನಂತರ ವಿಕೇಂದ್ರಿಕರಣ ನೀತಿಯ ಮೇರೆಗೆ ಈ ಶಾಲೆಗಳನ್ನು ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 146 ಯೋಉಮೌ 2004, ದಿನಾಂಕ: 16–10–2004 ಹಾಗೂ ಸಕಇ 461 ಪಕವಿ 2004, ದಿನಾಂಕ: 20–11–2004ರಲ್ಲಿ ದಿನಾಂಕ 01–04–2005ರಿಂದ ಅನ್ವಯಿಸುವಂತೆ ಜಿಲ್ಲಾ ಪಂಚಾಯತ್‌ಗಳ ವ್ಯಾಪ್ತಿಗೆ ತರಲಾಗಿತ್ತು.

2009–10ನೇ ಸಾಲಿನಲ್ಲಿ ಪ್ರತಿಭಾನ್ವಿತ ಗ್ರಾಮಾಂತರ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಬಾಲಕಿಯರಿಗಾಗಿ 114 ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗಳನ್ನು ಪ್ರಾರಂಭಿಸಲಾಗಿದೆ.

ಅಂತಹ ಮಕ್ಕಳಿಗೆ ಉತ್ತಮ ಗುಣಮಟ್ಟದ ಶಿಕ್ಷಣ ನೀಡುವ ಸಲುವಾಗಿ ವಸತಿ ಶಾಲೆಗಳನ್ನು ಪ್ರಾರಂಭಿಸಲಾಗಿದ್ದು ಸಂಬಂಧಪಟ್ಟ ಪ್ರಾಧಿಕಾರಗಳು ಈ ಶಾಲೆಗಳ ಅವಶ್ಯಕತೆಗಳಿಗೆ ವಿಶೇಷ ಗಮನಹರಿಸಬೇಕಾಗಿದೆ. ಆದರೆ ಈಗಿರುವ ಆಡಳಿತ ವ್ಯವಸ್ಥೆಯಲ್ಲಿ ಕೆಲವು ನ್ಯೂನ್ಯತೆಗಳು ಸರ್ಕಾರದ ಗಮನಕ್ಕೆ ಬಂದಿರುತ್ತವೆ. ಅದಲ್ಲದೆ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು ಹಾಗೂ ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗಳನ್ನು ವಿವಿಧ ಇಲಾಖೆಗಳು ಮಂಜೂರು ಮಾಡುತ್ತಿದ್ದು ಈ ಶಾಲೆಗಳ ಆಡಳಿತದಲ್ಲಿ ಏಕರೂಪತೆ ಹಾಗೂ ಶೈಕ್ಷಣಿಕ ಶ್ರೇಷ್ಠತೆ ತರಲು ಕನಿಷ್ಟ ಜಿಲ್ಲಾ ಮಟ್ಟದಲ್ಲಿ ಒಂದು ಸಮಿತಿ ರಚಿಸುವ ಅವಶ್ಯಕತೆ ಇರುತ್ತದೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 85 ಮೊದೇಶಾ 2009, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್ 2009**

ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು ಹಾಗೂ ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗಳಲ್ಲಿ ದಕ್ಷತೆ, (efficiency), ಶೈಕ್ಷಣಿಕ ಶ್ರೇಷ್ಠತೆ (academic excellence) ತರಲು ವಸತಿ ಶಾಲೆಗಳ ಉಸ್ತುವಾರಿಗೆ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಈ ಕೆಳಗಿನಂತೆ ಸಮಿತಿ ರಚಿಸಲಾಗಿದೆ.

| | | |
|---|---|---|
| 1 | ಜಿಲ್ಲಾಧಿಕಾರಿ | ಅಧ್ಯಕ್ಷರು |
| 2 | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ | ಸದಸ್ಯರು |

| | | |
|---|---|---|
| 3 | ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳು, ಜಿಲ್ಲಾ ಅಧಿಕಾರಿ, ಅಲ್ಪಸಂಖ್ಯಾತರು ಮತ್ತು ಜಿಲ್ಲಾ ಅಧಿಕಾರಿ, ಪರಿಶಿಷ್ಟ ವರ್ಗಗಳು | ಸದಸ್ಯರು |
| 4 | ಜಿಲ್ಲಾ ಪಂಚಾಯತ್‌ನಿಂದ ನಾಮನಿರ್ದೇಶನ ಹೊಂದಿದ ಒಬ್ಬ ಜಿಲ್ಲಾ ಪಂಚಾಯತ್ ಸದಸ್ಯರು | ಸದಸ್ಯರು |
| 5 | ಸಂಬಂಧಪಟ್ಟ ಜಿಲ್ಲಾ ಶಸ್ತ್ರ ಚಿಕಿತ್ಸಕರು | ಸದಸ್ಯರು |
| 6 | ಸಮಿತಿಯಿಂದ ನಾಮನಿರ್ದೇಶನ ಹೊಂದಿದ ಇಬ್ಬರು ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಪ್ರಾಂಶುಪಾಲರು | ಸದಸ್ಯರು |
| 7 | ಸಮಿತಿಯಿಂದ ನಾಮನಿರ್ದೇಶನ ಹೊಂದಿದ ಇಬ್ಬರು ಪಾಲಕರ ಪ್ರತಿನಿಧಿಗಳು (1–ಪುರುಷ, 1–ಮಹಿಳೆ) | ಸದಸ್ಯರು |
| 8 | ಸಮಿತಿಯಿಂದ ನಾಮನಿರ್ದೇಶನ ಹೊಂದಿದ ಇಬ್ಬರು ಶೈಕ್ಷಣಿಕ ತಜ್ಞರು | ಸದಸ್ಯರು |
| 9 | ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ | ಸದಸ್ಯ ಕಾರ್ಯದರ್ಶಿ |

ಸದರಿ ಸಮಿತಿಯ ಕಾರ್ಯಗಳು ಈ ಕೆಳಗಿನಂತಿವೆ:–

1. ಪ್ರವೇಶ ಪರೀಕ್ಷೆ ನಡೆಸುವುದು ಹಾಗೂ ಅರ್ಹತೆ ಆಧಾರದ ಮೇಲೆ ಪ್ರವೇಶಕ್ಕೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವುದು.
2. ಹೊರಗುತ್ತಿಗೆ ಆಧಾರದ ಮೇಲೆ ಶಿಕ್ಷಕರನ್ನು ಆಯ್ಕೆ ಮಾಡುವುದು.
3. ರಾಜ್ಯ ವಲಯದಡಿ ಒದಗಿಸಿದ ಅನುದಾನದಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದರ ಜೊತೆಗೆ ಶಾಲೆಗಳ ಉಸ್ತುವಾರಿ ನೋಡಿಕೊಳ್ಳುವುದು.
4. ಶಿಕ್ಷಣ ಇಲಾಖೆ ಮತ್ತು ಸರ್ವಶಿಕ್ಷಣ ಅಭಿಯಾನ ಇವುಗಳಿಂದ ಲಭ್ಯವಾಗುವ ಎಲ್ಲಾ ಶೈಕ್ಷಣಿಕ ಹಾಗೂ ಇತರೆ ಸೌಲಭ್ಯಗಳನ್ನು ದೊರಕಿಸಿಕೊಡುವುದು.

ಅದಲ್ಲದೆ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು ಮತ್ತು ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗಳಿಗೆ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘವನ್ನು **'ರಾಜ್ಯ ನೋಡಲ್ ಏಜೆನ್ಸಿ'** ಯನ್ನಾಗಿ ನೇಮಿಸಲಾಗಿದೆ.

ಆದರೆ ಜಿಲ್ಲಾ ವಲಯದಲ್ಲಿ ನೀಡುತ್ತಿರುವ ಅನುದಾನದಲ್ಲಿ ಜಿಲ್ಲಾ ಪಂಚಾಯತ್‌ಗಳಿಂದಲೇ ಈಗಿರುವಂತೆ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು ಹಾಗೂ ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗಳಿಗೆ ಅನುದಾನ ಬಿಡುಗಡೆ ಮಾಡಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಅಶೋಕ್ ಕುಮಾರ್. ಜೆ**

ಪಿ.ಆರ್. 2443

ಸರ್ಕಾರದ ಅಧೀನ ಕಾರ್ಯದರ್ಶಿ–1 (ಪ್ರ)
ಸಮಾಜ ಕಲ್ಯಾಣ ಇಲಾಖೆ.

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ಆದೇಶ ಸಂಖ್ಯೆ: ಪಸಂಮೀ 239 ಪಸಸೇ 2008, ಬೆಂಗಳೂರು, ದಿನಾಂಕ 21ನೇ ಅಕ್ಟೋಬರ್ 2009**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ತೂಬುಗೆರೆ ಹೋಬಳಿಯ ಮೆಳೆಕೋಟೆ ಕೃತಕ ಗರ್ಭಧಾರಣಾ ಕೇಂದ್ರವನ್ನು ಪಶುಚಿಕಿತ್ಸಾಲಯವನ್ನಾಗಿ ಮೇಲ್ದರ್ಜೆಗೇರಿಸಿರುವುದರಿಂದ ಅಲ್ಲಿಗೆ ಹುದ್ದೆಗಳ ಸೃಜನೆ.

**ಓದಲಾಗಿದೆ:** 1) ಪತ್ರಸಂಖ್ಯೆ: ಆಪಸಂ/ಡಿವಿಡಿ–3/ವಿವ–21 2008–09, ದಿನಾಂಕ: 08–09–2008, 31–10–2008, 28–02–2009 ಹಾಗೂ 05–05–2009

2) ಆದೇಶ ಸಂಖ್ಯೆ : ಪಸಂಮೀ 239 ಪಸಸೇ 2008, ದಿನಾಂಕ: 10–08–2009

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಒಂದು ಪಶುವೈದ್ಯಾಧಿಕಾರಿ ಹಾಗೂ ಒಂದು ಗ್ರೂಪ್–ಡಿ ಹುದ್ದೆಗಳನ್ನು ಹೊಸದಾಗಿ ಸೃಜಿಸಿ ಮೆಳೆಕೋಟೆ ಕೃತಕ ಗರ್ಭಧಾರಣಾ ಕೇಂದ್ರವನ್ನು ಪಶುಚಿಕಿತ್ಸಾಲಯವನ್ನಾಗಿ ಮೇಲ್ದರ್ಜೆಗೇರಿಸುವಂತೆ ಹಾಗೂ ಸದರಿ ಉನ್ನತೀಕರಣಕ್ಕೆ ಒಟ್ಟು ರೂ.2.60 ಲಕ್ಷ ವಾರ್ಷಿಕ ವಂಟನ ಅವಶ್ಯಕವಾಗಿದ್ದು, ಈ ಅನುದಾನವನ್ನು ಲೆಕ್ಕಶೀರ್ಷಿಕೆ, 2403–00–101–0–71(ಯೋಜನೆ) ಅಡಿ ಭರಿಸಲು ಮಂಜೂರಾತಿ ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆದೇಶದಲ್ಲಿ ಸರ್ಕಾರ ಮಿಶ್ರತಳಿ ರಾಸುಗಳ ಅಭಿವೃದ್ಧಿ, ಹೈನುಗಾರಿಕೆ ಚಟುವಟಿಕೆಗಳಿಗೆ ನೆರವು ನೀಡಲು ಮತ್ತು ಜಾನುವಾರುಗಳ ಚಿಕಿತ್ಸೆ ಹಾಗೂ ರೈತಾಪಿ ವರ್ಗದವರಿಗೆ ಹೆಚ್ಚಿನ ಮಟ್ಟದ ಪಶುವೈದ್ಯಕೀಯ ಸೇವೆಗಳನ್ನು ಒದಗಿಸುವ ಸಲುವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ತೂಬುಗೆರೆ ಹೋಬಳಿಯ ಮೆಳೆಕೋಟೆ ಕೃತಕ ಗರ್ಭಧಾರಣಾ ಕೇಂದ್ರವನ್ನು ಪಶುಚಿಕಿತ್ಸಾಲಯವನ್ನಾಗಿ ಉನ್ನತೀಕರಿಸಲು ಮಾತ್ರ ಮಂಜೂರಾತಿ ನೀಡಿ ಆದೇಶಿಸಿದೆ.

ಪಶುಚಿಕಿತ್ಸಾಲಯದ ಉನ್ನತೀಕರಣ ಉದ್ದೇಶ ಸಫಲವಾಗಬೇಕಾದರೆ ಅಗತ್ಯ ಸಿಬ್ಬಂದಿ ಹಾಗೂ ಅನುದಾನ ಒದಗಿಸಬೇಕಾಗಿರುತ್ತದೆ. ಮಾದರಿ (Norms) ಪ್ರಕಾರ ಉನ್ನತೀಕರಣಗೊಂಡಿರುವ ಮೆಳೆಕೋಟೆ ಪಶುಚಿಕಿತ್ಸಾಲಯಕ್ಕೆ ಒಂದು ಪಶುವೈದ್ಯಾಧಿಕಾರಿ ಮತ್ತು ಒಂದು ಡಿ–ದರ್ಜೆ ನೌಕರ ಹುದ್ದೆಯನ್ನೊಳಗೊಂಡಂತೆ ಒಟ್ಟು 2 ಹುದ್ದೆಗಳನ್ನು ಹೊಸದಾಗಿ ಸೃಜಿಸಬೇಕಾಗಿರುತ್ತದೆ ಹಾಗೂ ಉನ್ನತೀಕರಣಕ್ಕೆ ಅಗತ್ಯ ಅನುದಾನವನ್ನು ಒದಗಿಸಬೇಕಾಗಿರುತ್ತದೆ. ಈ ದಿಸೆಯಲ್ಲಿ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರ, ಪಶುಚಿಕಿತ್ಸಾಲಯವಾಗಿ ಉನ್ನತೀಕರಣಗೊಂಡಿರುವ ಮೇಳಕೋಟೆ ಸಂಸ್ಥೆಗೆ ಹೊಸದಾಗಿ ಹುದ್ದೆಗಳನ್ನು ಸೃಜಿಸಲು ಹಾಗೂ ಅಗತ್ಯ ಅನುದಾನ ಒದಗಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರ ಬೆಂಗಳೂರು ಗ್ರಾಮಾಂತರ ಜಿಲ್ಲೆ, ತೂಬುಗೆರೆ ಹೋಬಳಿಯ, ಮೆಳೇಕೋಟೆ ಗ್ರಾಮದ ಪಶುಚಿಕಿತ್ಸಾಲಯಕ್ಕೆ ಹೊಸದಾಗಿ ಒಂದು ಪಶುವೈದ್ಯಾಧಿಕಾರಿ ಹುದ್ದೆ ಹಾಗೂ ಒಂದು ಗ್ರೂಪ್ 'ಡಿ' ಹುದ್ದೆಯನ್ನು ಸೃಜಿಸಿ ಆದೇಶಿಸಿದೆ.

ಸದರಿ ಹುದ್ದೆಗಳಿಗೆ ವೇತನ ಭರಿಸಲು ವಾರ್ಷಿಕ ರೂ.2,60,000–00(ರೂಪಾಯಿ ಎರಡು ಲಕ್ಷದ ಅರವತ್ತು ಸಾವಿರ ಮಾತ್ರ) ಗಳನ್ನು ಲೆಕ್ಕ ಶೀರ್ಷಿಕೆ 2403–00–101–0–71 (ಯೋಜನೆ) ಅಡಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 517 ವೆ.4/2008, ದಿನಾಂಕ:09–09–2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಪಿ. ನಾಗರಾಜ**

ಪಿ.ಆರ್. 2444 ಪೀಠಾಧಿಕಾರಿ–2

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ–ಎ)

**ಸಹಕಾರ ಸಚಿವಾಲಯ**

**ವಿಷಯ:** ಕೋಲಾರ ಜಿಲ್ಲಾ ಸಹಕಾರ ಒಕ್ಕೂಟ, ಕೋಲಾರ ಇದರ ಆಡಳಿತ ಮಂಡಳಿ ಚುನಾವಣೆ ನಡೆಸಲು ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಇ 89 ಸಸಂನೋ 2009 ದಿನಾಂಕ: 06/07/2009

2. ಸಹಕಾರ ಸಂಘಗಳ ನಿಬಂಧಕರು ಬೆಂಗಳೂರು ಇವರ ಪತ್ರ ಸಂಖ್ಯೆ: ಅನಿ/ಕೈಸಸಂ/60/2009–10 ದಿನಾಂಕ:22/09/2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸಹಕಾರ ಸಂಘಗಳ 1959ರ ಕಲಂ 39(ಎ)(4) ನ್ನು ಮಾರ್ಪಡಿಸಿ ಕೋಲಾರ ಜಿಲ್ಲಾ ಸಹಕಾರ ಒಕ್ಕೂಟ, ಕೋಲಾರ ಇದರ 2009–10ರಿಂದ 2013–14ನೇ ಸಾಲುಗಳ ಆಡಳಿತ ಮಂಡಳಿ ಚುನಾವಣೆ ನಡೆಸಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಇವರು ಕೋಲಾರ ಜಿಲ್ಲಾ ಸಹಕಾರ ಒಕ್ಕೂಟ ನಿ, ಕೋಲಾರ ಇದರ ಬೈಲಾ ತಿದ್ದುಪಡಿಯನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ ಇವರ ಹಂತದಲ್ಲಿ ತಿರಸ್ಕರಿಸಿದ ಕಾರಣ, ಸದರಿ ಯೂನಿಯನ್ ಇವರು ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಇವರ ನ್ಯಾಯಾಲಯದಲ್ಲಿ ಮೇಲ್ಮನವಿಯನ್ನು ಸಲ್ಲಿಸಿರುವುದಕ್ಕೆ ದಿನಾಂಕ: 01/08/2009ರ ಆದೇಶದಲ್ಲಿ ಕೋಲಾರ ಜಿಲ್ಲೆಯ ಎಲ್ಲಾ ಸಹಕಾರ ಸಂಘಗಳಿಗೆ ಪ್ರಾತಿನಿಧ್ಯ ನೀಡಿ ಬೈಲಾ ತಿದ್ದುಪಡಿ ಮಾಡಿ ಪ್ರಸ್ತಾವನೆ ಸಲ್ಲಿಸಲು ನಿರ್ದೇಶನ ನೀಡಿರುತ್ತಾರೆ. ಇದರಿಂದ ಬೈಲಾ ತಿದ್ದುಪಡಿಗೆ 2008–09ನೇ ಸಾಲಿನ ಮಹಾಸಭೆಯನ್ನು ದಿನಾಂಕ:10/09/2009 ರಂದು ಕರೆಯಲು ಆಡಳಿತ ಮಂಡಳಿಯವರು ತೀರ್ಮಾನಿಸಿರುವುದಾಗಿ, ಸರ್ಕಾರದ ಆದೇಶದಂತೆ ಚುನಾವಣೆ ನಡೆಸಲು ದಿನಾಂಕ:30/09/2009 ರವರೆಗೆ ಕಾಲಾವಕಾಶವಿದ್ದು, ಬೈಲಾ ತಿದ್ದುಪಡಿಯಾದ ನಂತರ ಚುನಾವಣೆ ಜರುಗಿಸಲು ಉಪನಿಯಮದ ತಿದ್ದುಪಡಿ ಅವಶ್ಯವಿರುವುದರಿಂದ ಕೋಲಾರ ಜಿಲ್ಲಾ ಸಹಕಾರ ಒಕ್ಕೂಟ, ನಿ ಕೋಲಾರ ಇದರ 2009–10 ರಿಂದ 2013–14 ಸಾಲುಗಳ ಆಡಳಿತ ಚುನಾವಣೆಯನ್ನು ದಿನಾಂಕ:31/12/2009ರವರೆಗೆ ಕಾಲಾವಧಿಯನ್ನು ವಿಸ್ತರಿಸಲು

